# ದೊಡ್ಡಣ್ಣ

## ೧

ದೊಡ್ಡಣ್ಣನಾಗಿ ಹುಟ್ಟುವುದಕ್ಕೆ ಸರ್ವಸಾಮಾನ್ಯ ಪುಣ್ಯ ಸಾಲದು. ಅವನೊಂದಿಗೆ ಒಂದಲ್ಲ, ಹಲವು ಅಧಿಕಾರಗಳು ಹುಟ್ಟಿ ಬಂದಿವೆ. ತಮ್ಮಂದಿರು ಇನ್ನೂ ತೊದಲಡಿಯಿಡುತ್ತಾ ಹತ್ತು ಹೆಜ್ಜೆಗಳಲ್ಲಿ ಇಪ್ಪತ್ತು ಸಲ ಮುಗ್ಗರಿಸಿ ಬೀಳುವಾಗ ಅವರನ್ನು ಕೈಗೊಟ್ಟು ನಡೆಯಿಸುವ ಹೆಗ್ಗಳಿಕೆ ಅವನಲ್ಲಿದೆ. "ಆಕಾಶದಲ್ಲಿ ಕಾಣುವವನು ಯಾರು, ತಮ್ಮಾ? ಚಂದ ದೇವರಲ್ಲ; ಚಂದ್ರ ದೇವರು!" ಎಂದು ನೂರಾರು ಸಲ ಹಟಮಾಡಿ ಹೇಳಿ ಮಕ್ಕಳ ಅಕ್ಷರಮಾಲೆಗೆ ಹೊರಗಾದ ರೇಫದ ಉಚ್ಚಾರಣೆಯನ್ನು ಕಲಿಸಿದ ಸಾಹಸಿಯೇ ಅವನು. ತೆಗೆದು ಮುಂಡಾಡುವ ರಭಸದ ಸಡಗರದಲ್ಲಿ ಕೈಜಾರಿ ನೆಲದಲ್ಲಿ ಬಿದ್ದ ಮಕ್ಕಳ ಚೀತ್ಕಾರವನ್ನು ಕೇಳಿ, ತಾಯಿ ಬಂದು ಗದರಿಸುವಾಗ, ಅವಳ ಬಿರುನೋಟವನ್ನು ಎದುರಿಸಿ, ಮಾತುಮಾತಿಗೆ ಉತ್ತರಕೊಟ್ಟು, ಕೊನೆಗೆ ಏಟಿನಲ್ಲಿ ಅವಸಾನಹೊಂದುವ ದಿಟ್ಟತನವನ್ನು ಅನೇಕ ವೇಳೆ ತೋರುವ ಸಂದರ್ಭವೂ ದೊಡ್ಡಣ್ಣನಿಗುಂಟು. ತಮ್ಮನು ಕುಳಿತಲ್ಲಿ ಕುಳಿತು, ನಿಂತಲ್ಲಿ ನಿಂತು, ಅವನಿಗೆ ಹಸಿವಾದರೆ ಮಾತ್ರ ತನಗೂ ಹಸಿವಾಯಿತೆನ್ನುವ ಎದೆಯ ಎರಕಕ್ಕೂ ದೊಡ್ಡಣ್ಣನೊಬ್ಬನೆ ಪಾತ್ರನು. ಇಂತಹ ಹಕ್ಕುಗಳನ್ನೆಲ್ಲಾ ಮೊತ್ತಮಾಡುವಾಗ, ದೊಡ್ಡಣ್ಣನಾಗುವುದು ಯಾವ ಮಕ್ಕಳಿಗೂ ಬೇಡವಾಗಿ ಕಾಣುವುದಿಲ್ಲ. ಅದರಲ್ಲಿಯೂ, ತಾವಿನ್ನೂ 'ಅಲ್ಲಿ ಗುಮ್ಮ! ಇಲ್ಲಿ ಗುಮ್ಮ!' ಎಂಬ ಬೆದರಿಕೆಯ ಮಾತಿನಿಂದ ಬೆಚ್ಚಿಬೀಳುತ್ತಿರುವಾಗ, ದೊಡ್ಡಣ್ಣನೊಬ್ಬನೆ ಪೇಟೆಗೆ ಹೋಗುತ್ತಾನೆ; ಬರುತ್ತಾನೆ; ದೊಡ್ಡವರೊಂದಿಗೆ ಆಡುತ್ತಾನೆ; ನೋಡುತ್ತಾನೆ; ಮಾತಿಗೆ ಮಾತು ಬೆರಸುತ್ತಾನೆ; ತನ್ನ ಅಭಿಪ್ರಾಯವನ್ನು ಕೊಡುತ್ತಾನೆ; ಎಂಬ ಎಲ್ಲಾ ವಿಷಯಗಳನ್ನು ನೋಡಿ ಮಕ್ಕಳು ತಾವೂ ಅವನಂತೆ ದೊಡ್ಡವರಾಗಿಯೆ ಹುಟ್ಟಬೇಕಿತ್ತೆಂದು ಬಗೆದರೆ ಅದು ಅನ್ಯಾಯವಲ್ಲ.

ಮನೋಹರನಿಗೆ ತನ್ನ 'ದೊಡ್ಡಣ್ಣ'ನ ಹೆಸರನ್ನು ಕೇಳುವಾಗ ತಾನು ಅಣ್ಣನಾಗಲಿಲ್ಲವಲ್ಲಾ! ಎಂಬ ಅಸೂಯೆಯಿಲ್ಲ: ಪ್ರೀತಿ. ಪ್ರಾಯ– ಎಂದು ಹೇಳುವಷ್ಟು ಅವನಿಗೆ ವಯಸ್ಸಾಗದಿದ್ದರೂ, ಕೆಲವೊಂದು ಅಧಿಕಾರವನ್ನು ತಂದೆಯಿಂದ ಪಡೆವಲ್ಲಿ ತನ್ನೊಡನೆ ಅಣ್ಣನ ಹೆಸರನ್ನೂ ಸೇರಿಸುವನು. ತಂದೆಗೆ ಮೀಸೆಯುಂಟು! ತನಗೂ ತನ್ನ ದೊಡ್ಡಣ್ಣನಿಗೂ ಏಕೆ ಮೀಸೆಯಿಲ್ಲ? ಎಂದು ಅವನ ಪ್ರಶ್ನೆ. ತಾಯಿಯು ತನ್ನನ್ನು ಕರೆವಂತೆ ದೊಡ್ಡಣ್ಣನನ್ನೂ 'ಮಗ' ಎಂದೇಕೆ ಸಂಬೋಧಿಸುವುದಿಲ್ಲ? ಎಂಬುದು ಇನ್ನೊಂದು ಪ್ರಶ್ನೆ. ತನ್ನ ತಂದೆಗೆ ಅವನು 'ಮಗ'ನಾದರೆ ತಾಯಿಗೂ ಮಗನಲ್ಲವೆ? ಎಂದು ಮತ್ತೊಂದು ಪ್ರಶ್ನೆ. ಈ ರೀತಿಯಲ್ಲಿ ತಾಯೊಡನೆ ಕೇಳುತ್ತಿದ್ದ ಮನೋಹರನಿಗೆ ಹೆಚ್ಚು ಸಲ ದೊರೆತ ಉತ್ತರಗಳೆಂದರೆ ಬಲವಾದ ಪೆಟ್ಟುಗಳು ಮಾತ್ರ. ದೊಡ್ಡಣ್ಣನಲ್ಲಿ ಕೇಳಿದಾಗ ಅವನು ಒಂದನ್ನೂ ಬಿಡದೆ ಸರಿಯಾಗಿ ಉತ್ತರಕೊಡುತ್ತಿದ್ದನು. ಆದುದರಿಂದ ಅವನಿಗೆ ದೊಡ್ಡಣ್ಣನಲ್ಲಿ ತನ್ನ ಜೀವವನ್ನು ಅವನ ಜೀವದಲ್ಲಿ ಎರಕ ಹೊಯಿದಷ್ಟು ಪ್ರೇಮ.

ಆದರೂ 'ದೊಡ್ಡಣ್ಣ'ನನ್ನು ತಾಯಿಯು ಮಗನೆಂದು ಕರೆಯದಿರುವುದಕ್ಕೆ ಸರಿಯಾದ ಕಾರಣವು ಅವನಿಗೆ ಇದುವರೆಗೂ ದೊರೆತಿರಲಿಲ್ಲ. ಆದುದರಿಂದ, ತಾಯಿಯ ಪೆಟ್ಟಿಗೆ ವೈಯ್ಯೊಡ್ಡುವುದಕ್ಕೆ ಹೆದರಿ, ದೊಡ್ಡಣ್ಣನನ್ನೆ ಮತ್ತೂಮತ್ತೂ ಕೇಳಿದನು. ಅವನೇನೂ ಉತ್ತರಕೊಡಲಿಲ್ಲ. ಏನೇನೋ ಹೇಳಿದನು; ಮಾತಾಡುವಾಗ ಧ್ವನಿ ಗದ್ಗದವಾಯಿತು. ತುಟಿ ನಡುಗಿತು, ಮುಖ ಕಂದಿತು, ಒಂದೆರಡು ಬಿಸಿಬಿಸಿಯಾದ ಕಣ್ಣೀರ ಹನಿಗಳು ಮನೋಹರನ ಕೈಗಳ ಮೇಲೂ ಬಿದ್ದುವು. ಆಗ ಅವನು, "ಅಳುವುದು ಯಾಕಣ್ಣಾ? ನಾನು ಈ ದಿನ ತಾಯಿಯಲ್ಲಿ ಖಂಡಿತವಾದ ಮಾತನ್ನು ಹೇಳುತ್ತೇನೆ. ನನ್ನನ್ನು ಮಗನೆಂದು ಕರೆವಂತೆ, ನಿನ್ನನ್ನೂ ಇಂದಿನಿಂದ ಕರೆಯದಿದ್ದರೆ ನಾನು ನಿಶ್ಚಯವಾಗಿಯೂ ಊಟಮಾಡುವುದಿಲ್ಲ; ಎಂದು ಚಂಡಿಹಿಡಿದು ಕುಳಿತುಕೊಳ್ಳುತ್ತೇನೆ; ಏನು ಮಾಡುತ್ತಾಳೆ ನೋಡುವ," ಎಂದು ಸಂತೈಸಿದನು. ಮನೋಹರನೇನೋ ಅಣ್ಣನನ್ನು ಸಂತಯಿಸಬೇಕೆಂದೇ ಹೀಗೆ ಆಡಿದುದು. ಆದರೆ ಆದರ ಫಲವು ವಿಪರೀತವಾಯಿತು. ಮನೋಹರನ ಮಾತನ್ನು ಕೇಳಿ ಅರಳಬೇಕಾಗಿದ್ದ

ಕಣ್ಣುಗಳಿಂದ ಕಣ್ಣೀರು ಕೋಡಿ ಹರಿಯಿತು. ಮುಂದೆ ಮಾಡುವುದು ಏನೆಂದು ಮನೋಹರನಿಗೆ ಗೊತ್ತಾಗಲಿಲ್ಲ. "ಹೋಗಲಿ! ನಿನಗಿಷ್ಟು ದುಃಖವಾಗುವುದಿದ್ದರೆ ಈ ಪ್ರಶ್ನೆಯನ್ನು ಇನ್ನೆಂದೂ ಕೇಳುವುದಿಲ್ಲ. ಒಮ್ಮೆ ಅಳುವುದನ್ನು ನಿಲ್ಲಿಸು ಅಣ್ಣಾ!" ಎಂದು ಅವನ ಬಾಯಿಗೆ ಕೈಯಿಟ್ಟನು. ದೊಡ್ಡಣ್ಣನು ಮನೋಹರನನ್ನು ಬಿಗಿಯಾಗಿ ಅಪ್ಪಿ, "ಇಲ್ಲ, ಮನು! ಅಳುವುದಿಲ್ಲ," ಎಂದು ಹೇಳಿದ ಮೇಲೆ ಅವನ ಮನಸ್ಸು ಸ್ವಲ್ಪ ಹಗುರವಾಯಿತು.

ದಿನಗಳು ಕಳೆದುವು. ಯಾಕೆಂದು ಗೊತ್ತಿಲ್ಲ; ಬರಬರುತ್ತಾ ತನ್ನ ದೊಡ್ಡಣ್ಣನು ಎಂದಿನಂತಿರದೆ ಮನಸ್ಸಿನೊಳಗೆ ಕೊರಗುತ್ತಾ ಸೊರಗುತ್ತಾ ಇರುವಂತೆ ಮನೋಹರನಿಗೆ ತಿಳಿದುಬಂತು. ಒಮ್ಮೊಮ್ಮೆ ತನ್ನ ತಾಯಿಯು ಉರಿಮೋರೆಯಿಂದ ದೊಡ್ಡಣ್ಣನೊಡನೆ, "ನೀನು ಮನೆಗೆ ಮಾರಿ! ಅವರು ತಂದುದೆಲ್ಲಾ ನಿನ್ನ ಹೊಟ್ಟೆತುಂಬಿಸುವುದಕ್ಕಾಯಿತು!" ಎಂದು ಮೊನೆಮಾತುಗಳನ್ನು ಆಡುತ್ತಿದ್ದಳು. "ಮಕ್ಕಳ ಆರೈಕೆಯೆ ನನಗೆ ಸಾಕಾಗಿದೆ. ಭೂಮಿಗೆ ಭಾರ, ಅನ್ನಕ್ಕೆ ಸಂಚಕಾರವಾದ ನಿನ್ನ ಚಾಕರಿ ಮಾಡುವವರು ಯಾರು? ಎಲ್ಲಾದರೂ ಹೋಗು, ಬಿಕ್ಕೆಬೇಡು, ಹೊಟ್ಟೆಗೆ ಬೇಕಾದ ಕೂಳು ಸಿಕ್ಕುವುದು, ಇಲ್ಲಿ ನಿನಗೆ ಎಡೆಯಿಲ್ಲ"ವೆಂದು, ಇಡೀ ಮನೆಗೆ ತಾನೆ ಅಧಿಕಾರಿಣಿಯೆಂಬಂತೆಯೂ, ತನ್ನ ಮಕ್ಕಳಲ್ಲದೆ ಇತರರಿಗೆ ಲೋಕದಲ್ಲಿ ಸ್ಥಳವಿಲ್ಲಯೆಂಬಂತೆಯೂ ಕೆಡುಮೋರೆಯಿಂದ ಆಡುತ್ತಿದ್ದ ತಾಯಿಯ ಮಾತುಗಳನ್ನವನು ಕೇಳುತ್ತಿದ್ದನು. "ಏನು, ತಾಯೆ, ಇದು? ನನ್ನ ದೊಡ್ಡಣ್ಣನನ್ನು ಬೆದರಿಸಬಾರದು," ಎಂದು ದೈನ್ಯದಿಂದವನು ಬೇಡಿಕೊಂಡನು. ಆಗ ಹೆಬ್ಬುಲಿಯಂತೆ ಬುಸುಗುಟ್ಟುತ್ತಾ ತಾಯಿಯು, "ಇನ್ನು ಮುಂದೆ ಆ ಪರದೇಶಿಯನ್ನು ದೊಡ್ಡಣ್ಣನೆಂದರೆ ನಾಲಗೆಯನ್ನು ಕೊಯ್ಯುತ್ತೇನೆ!" ಎಂದು ಗರ್ಜಿಸಿದಳು. ಆ ಮೇಲೆ ತಾಯಿಯ ಮುಂದೆ ದೊಡ್ಡಣ್ಣನನ್ನು ಹೆಸರುಹಿಡಿದು ಕರೆವ ಸಂತುಷ್ಟಿಯೂ ಮನೋಹರನಿಗೆ ಇಲ್ಲದಂತಾಯಿತು.

ಒಂದು ದಿನ ಮನೋಹರನ ತಂದೆ (ಭೀಮರಾಯನು) ಯಾವುದೋ ಒಂದು ಯೋಚನೆಯಲ್ಲಿ ಮಗ್ನನಾಗಿ ಚಾವಡಿಯ ಬದಿಯಲ್ಲಿ ಕುಳಿತಿದ್ದನು. 'ದೊಡ್ಡಣ್ಣ'ನು ಶಾಲೆಗೆ ಹೋಗಿದ್ದನು. ತಾಯಿಯು ಮನೆಗೆಲಸವನ್ನು

ಮಾಡುತ್ತಿದ್ದಳು. ಮನೋಹರನು ಅಣ್ಣನಿರದ - ಬೇಸರದಿಂದ ಒಳಮನೆಯನ್ನು ಸೇರಿ, ಆ ಮಾತು, ಈ ಮಾತುಗಳನ್ನಾಡಿ, ತಾಯಿಯನ್ನು ಕೆಣಕಿದುದರ ಪರಿಣಾಮವಾಗಿ ಎಂದಿಗಿಂತಲೂ ಹೆಚ್ಚು ಕಾರವುಳ್ಳ ಪೆಟ್ಟಿನ ರುಚಿಯನ್ನು ನೋಡಿ, ತಂದೆಯ ಬಳಿಗೆ ಬಂದನು. ಬಂದವನೆ, ನಿನ್ನ ಕೈಯನ್ನು ಸ್ವಲ್ಪ ಆಚೆಗೆ ಸರಿಸಪ್ಪಾ! ನಾನು ಕುಳಿತುಕೊಳ್ಳುತ್ತೇನೆ," ಎಂದು ತನ್ನೊಬ್ಬನ ಅಧಿಕಾರಕ್ಕೆ ಒಳಪಟ್ಟ ತಂದೆಯ ತೊಡೆಯನ್ನೇರಿ, ಕೈಬೆರಳುಗಳನ್ನು ಲೆಕ್ಕಿಸುತ್ತಾ, ಪೆಟ್ಟುಗಳ ನೋವನ್ನು ಮರೆತುಬಿಟ್ಟನು. ಅಷ್ಟರಲ್ಲಿ ದೊಡ್ಡಣ್ಣನ ನೆನಪು, ಹಾರಿಬಂದ ಹಕ್ಕಿಯಂತೆ, ಅವನ ಮನಸ್ಸನ್ನು ಹೊಕ್ಕು, ಅಲ್ಲೆ ಕುಳಿತಿತು. ಮನೋಹರನು ಕೂಡಲೆ ತಂದೆಯೊಡನೆ, "ಅಪ್ಪಾ! ನಾನೊಂದನ್ನು ಕೇಳುತ್ತೇನೆ, ಉತ್ತರ ಕೊಡುವೆಯೊ?" ಎಂದು ಕೇಳಿದನು. ಅದಕ್ಕೆ ಭೀಮರಾಯನು, "ನೀನು ಕೇಳುವುದೇನು, ಮನು?" ಎಂದು ಪ್ರಶ್ನೆಮಾಡಿದನು.

"ಪೆಟ್ಟುಕೊಡದಿದ್ದರೆ ಹೇಳುತ್ತೇನೆ."

"ಇಲ್ಲ, ಮನು! ನಿನಗೆ ನಾನು ಎಂದಾದರೂ ಹೊಡೆದದ್ದುಂಟೇ?"

"ನನಗೆ ಹೊಡೆದದ್ದಿಲ್ಲ; ಆದರೆ, ದೊಡ್ಡಣ್ಣನನ್ನು ಒಮ್ಮೊಮ್ಮೆ ಹೊಡೆಯುತ್ತೀ. ಮೊನ್ನೆ ಶಾಯಿಕುಪ್ಪಿಯನ್ನು ಒಡೆದದ್ದು ನಾನು. ತಾಯಿಯು ಗದರಿಸಿದಳೆಂದು ನೀನೂ ಅಣ್ಣನನ್ನು ಗದರಿಸಿದೆ. ಹೊಡೆಯುವುದಕ್ಕೆ ಕೈಯೆತ್ತಿದೆ. ನಾನು ಆ ಸಮಯಕ್ಕೆ ಬಾರದಿದ್ದರೆ, ಪಾಪ! ದೊಡ್ಡಣ್ಣನ ಗತಿಯೇನಾಗುತ್ತಿತ್ತೊ."

"ಹೌದು, ಮನು! ಸ್ವಲ್ಪ ಅಜಾಗ್ರತೆಯಾಯಿತು."

"ಇನ್ನು ಮುಂದೆ ದೊಡ್ಡಣ್ಣನನ್ನು ಹೊಡೆಯಬಾರದು; ಬಯ್ಯಲೂ ಬಾರದು."

"ಹುಂ."

"ಅಪ್ಪಾ! ನನಗೆ ದೊಡ್ಡಣ್ಣನನ್ನು ಕಂಡರೆ ತಾಯಿಯನ್ನು ಕಂಡದ್ದಕ್ಕಿಂತಲೂ ಹೆಚ್ಚು ಸಂತೋಷ ಆಗುತ್ತದೆ. ನಿನಗೇಕೆ ಆಗುವುದಿಲ್ಲ?"

"ಆಗುತ್ತದೆ, ಮನೂ!"

"ಇಲ್ಲಪ್ಪಾ! ನೀನೂ ಅವನನ್ನು ಕಂಡರೆ ಒಮ್ಮೊಮ್ಮೆ ಉರಿಮೋರೆಯನ್ನು ತೋರಿಸುತ್ತೀ."

"ಇಲ್ಲ, ಮಗೂ!"

"ನಾನು ಖಂಡಿತವಾಗಿಯೂ ಹೇಳುತ್ತೇನೆ. ನೀನು ತಾಯಿಯ ಮಾತನ್ನು ನಂಬಬಾರದು."

"ಯಾಕೆ?"

"ಅವಳು ಸುಳ್ಳು ಹೇಳುತ್ತಾಳೆ."

"ಹುಂ."

"ಯಾಕೆ 'ಹುಂ' ಎಂದು ಉತ್ತರಕೊಡುವೆ? ತಾಯಿಯ ಕುರಿತು ಹೀಗೆ ಹೇಳುವುದು ನಿನ್ನ ಮನಸ್ಸಿಗೆ ಆಗುವುದಿಲ್ಲ; ಅಲ್ಲವೇ?"

"ಹಿರಿಯರನ್ನು ಬಯ್ಯಬಾರದು, ಮನು!"

"ನಾನು ದೊಡ್ಡಣ್ಣನನ್ನು ಬಯ್ಯುವುದಿಲ್ಲ. ನಿನ್ನನ್ನು ಬಯ್ಯುವುದಿಲ್ಲ. ಆದರೆ, ತಾಯಿಯನ್ನು ಮಾತ್ರ–"

"ತಾಯಿಯಿಂದ ಹೆಚ್ಚಿನವರು ನಿನಗೆ ಯಾರೂ ಇಲ್ಲ."

"ಇದ್ದಾರೆ! ನಮ್ಮ ದೊಡ್ಡಣ್ಣನಿದ್ದಾನೆ."

"ಆಯಿತು. ನೀನು ಯಾವುದನ್ನು ಕೇಳುತ್ತೇನೆ ಎಂದು ಹೇಳಿದ್ದು?"

"ತಾಯಿಯು ನನ್ನನ್ನು 'ಮಗ' ಎಂದು ಕರೆಯುತ್ತಾಳೆ; ದೊಡ್ಡಣ್ಣನನ್ನು ಏಕೆ ಕರೆಯುವುದಿಲ್ಲ?"

"ಅವಳಿಗೆ ಅವನು ಮಗನಲ್ಲ."

"ನಾನು?"

"ಹೌದು! ನೀನು ಅವಳ ಮಗ."

"ಹಾಗಾದರೆ ನನಗೂ ತಂದೆ ನೀನು; ದೊಡ್ಡಣ್ಣನಿಗೂ ತಂದೆ ನೀನು; ಇದು ಹೇಗೆ?"

"ನಿನ್ನ ದೊಡ್ಡಣ್ಣನ ತಾಯಿ ತೀರಿಹೋಗಿದ್ದಾಳೆ."

"ಹಾಗಾದರೆ ಅವನಿಗೆ ತಾಯಿ ಇಲ್ಲ."

"ಇಲ್ಲ, ಮನು!"

"ನನಗೆ ಕಣ್ಣೀರು ಬರುತ್ತದೆ. ನಮ್ಮ ದೊಡ್ಡಣ್ಣನಿಗೆ ತಾಯಿಯಿಲ್ಲ. ನನ್ನ ತಾಯಿ ಅವನನ್ನು ಬೈಯುತ್ತಾಳೆ, ಬೆದರಿಸುತ್ತಾಳೆ. ಹೊಡೆಯುತ್ತಾಳೆ."

"ಹೀಗೆ ತಾಯಿಯನ್ನು ದೂರಬಾರದಪ್ಪಯ್ಯಾ."

"ಹಾಗಾದರೆ ನೀನು ಅಳದಿರಬಾರದು. ದೊಡ್ಡಣ್ಣನಿಗೆ ತಾಯಿಯಿಲ್ಲವೆಂದು ಕೇಳಿ ನನಗೆ ದುಃಖಬರುತ್ತದೆ; ನಿನಗೆ ಬರುವುದಿಲ್ಲ."

ಮಗನ ಈ ಮಾತನ್ನು ಕೇಳಿದ ಕೂಡಲೆ ಕಣ್ಣೀರ ಪರಿಚಯಕ್ಕೆ ಹಿಂಜರಿಯುತ್ತಿದ್ದ ಭೀಮರಾಯನ ಕಣ್ಣುಗಳಲ್ಲಿ ಸರಸರನೆ ಅಶ್ರುಪ್ರವಾಹವು ಉಕ್ಕೇರಿತು. ಇದನ್ನು ನೋಡಿ ಮನೋಹರನು, "ಅಪ್ಪ! ನೀನು ಒಳ್ಳೆಯವನು! ದೊಡ್ಡಣ್ಣನಿಗೆ ತಾಯಿಯಿಲ್ಲವೆಂದು ನೀನು ಕಣ್ಣೀರನ್ನು ಸುರಿಸುತ್ತಿರುವೆ," ಎಂದು ತಂದೆಯ ಎಳೆಮನಸ್ಸಿಗೆ ಒಂದು ಪ್ರಮಾಣಪತ್ರವನ್ನು ಕೊಟ್ಟನು. ಮಗನು ಪ್ರಶ್ನೆಗಳಿಂದ ತನ್ನ ಪ್ರಜ್ಞೆಗೆ ದಾಳಿಯಿಡುತ್ತಿದ್ದಾಗ, ಸೋಲನ್ನು ತಪ್ಪಿಸುವ ಮಾರ್ಗವೇನೆಂದು ಭೀಮರಾಯನಿಗೆ ತೋರದಾಯಿತು. ಅಷ್ಟರಲ್ಲಿ ಶಾಲೆಬಿಟ್ಟು ಬಂದ ಶ್ಯಾಮನು ಅಂಗಳದಿಂದ ಜಗಲಿಗೆ ಕಾಲಿಟ್ಟನು. ಭೀಮರಾಯನು, "ನೋಡು, ಮನು! ನಿನ್ನ ದೊಡ್ಡಣ್ಣನು ಬಂದ," ಎಂದು ಹೇಳಿದುದೆ ತಡ; ಸರಕ್ಕನೆ ಅಲ್ಲಿಂದ ಎದ್ದು ಮನೋಹರನು, "ದೊಡ್ಡಣ್ಣಾ! ದೊಡ್ಡಣ್ಣಾ! ಇಂದು ತಂದೆಯಲ್ಲಿ ತಾಯಿಯ ದೂರು ಹೇಳಿದ್ದೇನೆ. ಇನ್ನು ಮುಂದೆ ಮೂಲೆಯಲ್ಲಿ ಕುಳಿತು ಮುಖವನ್ನು ಕಂದಿಸಬಾರದು; ತಿಳಿಯಿತೊ?" ಎಂದು ಹೇಳುತ್ತಾ ಶ್ಯಾಮನ ಪುಸ್ತಕಗಳ ಚೀಲಕ್ಕೆ ಕೈಹಾಕಿ, ತನ್ನ ಪ್ರೀತಿಯ ಸಚಿತ್ರ ಪುಸ್ತಕವೊಂದನ್ನು ತೆಗೆದು, ಹುಡುಗರಿಬ್ಬರ ಚಿತ್ರಗಳ ಮೇಲೆ ಬೆರಳಿಟ್ಟು, "ಇದು ದೊಡ್ಡಣ್ಣ! ಇದು ನಾನು," ಎಂದು ಜಗಲಿಯ ಉದ್ದಕ್ಕೂ ಓಡಾಡಿದನು.

೨

ಭೀಮರಾಯನಿಗೆ ತನ್ನವರೆಂದು ಹೇಳುವುದಕ್ಕೆ ಹೆಚ್ಚು ಮಂದಿ ಬಂಧುಗಳಿಲ್ಲ. ಸಂಸಾರವಾದರೂ ಚಿಕ್ಕದು. ಗಂಡ; ಹೆಂಡತಿ; ನಾಲ್ಕೈದು ವರ್ಷದ ಮನೋಹರನೆಂಬ ಎರಡನೆಯ ಹೆಂಡತಿಯ ಮಗ; ಇನ್ನೊಂದು ಕೈಗೂಸು; ಹನ್ನೆರಡು ವರ್ಷ ಪ್ರಾಯದ ಮಗ, ಎಂದರೆ ಶ್ಯಾಮ; ಮನೋಹರನ ಹೆಸರಿನಿಂದ ಕರೆಯುವುದಿದ್ದರೆ 'ದೊಡ್ಡಣ್ಣ'. ಇಷ್ಟೆ ಜನರಲ್ಲದೆ ಈ ಚಿಕ್ಕ ಕುಟುಂಬದಲ್ಲಿ ಮತ್ತಾರೂ ಇಲ್ಲ. ದಿನಂಪ್ರತಿ

ಕಚೇರಿಗೆ ಹೋಗ ಬಂದರೆ ಸರಿ; ವೆಚ್ಚಕ್ಕೆ ಬೇಕಾದ ಸಂಬಳ ಸಿಕ್ಕುತ್ತಿತ್ತು. ಸಾಲದುದಕ್ಕೆ 'ಕಲೆಕ್ಟರ್' ದೊರೆಗಳ ಸನ್ನಿಧಾನಕ್ಕೆ ಪ್ರವೇಶ ದ್ವಾರ ದಂತಿದ್ದ ಇವರ ದರ್ಶನಕ್ಕೆ ಬರುತ್ತಿದ್ದ ನಾಡಿಗರಿಂದ ಎಲ್ಲರಿಗೂ ಕಾಣು ವಂತೆ ತೆಗೆದುಕೊಳ್ಳಬಹುದಾದ ಕೈಕಾಣಿಕೆ. ಅದರ ಮೇಲೆ, ಗೋಪ್ಯ ವಾಗಿ ಬರುವ ಹವಿರ್ಭಾಗಗಳು. ಈ ರೀತಿಯ ಎಲ್ಲಾ ಆದಾಯಗಳನ್ನು ಲೆಕ್ಕಹಾಕಿ, ನೋಡಿದರೆ, ನಿತ್ಯದ ವೆಚ್ಚಹೋಗಿ ತಿಂಗಳೊಂದಕ್ಕೆ ಸ್ವಲ್ಪ ವಾದರೂ ಉಳಿತವಾದೀತೆಂದು ಜನರು ಆಡುತ್ತಿದ್ದರು. ತೋರಿಕೆಯ ಮಟ್ಟಿಗೆ, ಭೀಮರಾಯನ ಅಚ್ಚುಕಟ್ಟಿನ ಸಣ್ಣ ಆಡಳಿತೆಯಲ್ಲಿ ಸುಖ ಕ್ಕಲ್ಲದೆ ದುಃಖಕ್ಕೆ ಎಡೆಯೆ ಇರಲಿಲ್ಲ. ಆದರೆ ಇತ್ತಿತ್ತಲಾಗಿ ಅವನ ಮನಸ್ಸನ್ನು ದುಃಖದ ಕೀಟವು ಕೊರೆಯುತ್ತಿತೆಂದು ವದಂತಿ!

ಇದಕ್ಕೆ ಕಾರಣವೇನೆಂದು ಬಹುದೂರ ಹುಡುಕಿ ಹೋಗಬೇಕಾ ಗಿಲ್ಲ. ಎಲ್ಲಾ ಕೆಲಸಗಳನ್ನು ಮಾಡುವಾಗಲೂ ಬಿಡುಗಣ್ಣನಾಗಿಯೆ ಇದ್ದ ಭೀಮರಾಯನು ಪ್ರಾಯದ ಹೋಕಿನಲ್ಲಿ ಒಂದು ಸಣ್ಣ ತಪ್ಪನ್ನು ಮಾಡಿದನು. ಅದರಿಂದಾದ ಪರಿಣಾಮವು ಬಲು ದೊಡ್ಡದಾಯಿತು. ಅವನ ಆಯುಸ್ಸಿನ ದಿವಸದಲ್ಲಿ ಹನ್ನೆರಡರ ಮೇಲೆ ನಾಲ್ಕು ಗಂಟೆ ಕಳೆ ದಿತ್ತು. ಆಗ ಅವನ ಪ್ರಥಮ ಪತ್ನಿ ತೀರಿಹೋದಳು; ಎಂದ ಮೇಲೆ ಭೀಮರಾಯನು ವಿಧುರನಾದನೆಂಬ ಮಾತು ಪುನರುಕ್ತ. ಪಾರಲೌಕಿಕ ಸದ್ಗತಿಯನ್ನೆ ದೃಷ್ಟಿಯಲ್ಲಿಟ್ಟು ವಾದಮಾಡಿದರೂ ಭೀಮರಾಯನು ಪುನ ರ್ವಿವಾಹಮಾಡುವುದಕ್ಕೆ ಸಾಕಾದಷ್ಟು ಕಾರಣಗಳಿರಲಿಲ್ಲ. ಏಕೆಂದರೆ, ಅವನ ದಿವಂಗತ ಪತ್ನಿಯ ಸದ್ಗುಣಕ್ಕೆ ಸಾಕ್ಷಾತ್ ದೃಷ್ಟಾಂತವಾಗಿ ಅವಳ ಮಗ ಶ್ಯಾಮನಿದ್ದನು. ಆದರೂ ಮನೆಯಲ್ಲಿ ಅಡಿಗೆಗೆ ಯಾರೂ ಇಲ್ಲ ವೆಂದು—ಅಡಿಗೆ ಕೆಲಸಕ್ಕೆ ಬೇಕಾದಷ್ಟು ಉಮೇದ್ವಾರರು ಸಿಕ್ಕುವ ಊರ ಲ್ಲಿದ್ದರೂ—ಅವನು ಮದುವೆಯಾದನು. ಮದುವೆಯಾದ ಮೇಲಲ್ಲವೇ? ಅಡಿಗೆ ಮಾಡುವುದೊಂದೆ ತನ್ನ ಕೆಲಸವೆಂದು ಹೆಂಡತಿ ಸುಮ್ಮನಿರುತ್ತಾಳೆಯೆ? ಎಂದೂ ಇಲ್ಲ. ಮನೋರಮೆಯು ಕೆಲವೊಂದು ಅಧಿಕಾರಗಳನ್ನು ಸ್ವಾಯತ್ತಮಾಡಿಕೊಂಡಳು.

ಭೀಮರಾಯನಿಗೆ ತನ್ನ ತಪ್ಪು ತಿಳಿಯಿತು. ಮುಂದಾದರೂ ತಪ್ಪು ಮಾಡುವುದಿಲ್ಲವೆಂದು ಮನಸ್ಸಿಗೆ ಕಡಿವಾಣ ಹಾಕಿದನು. ಎರಡನೆಯ

ಮದುವೆಯಾದುದೇ ತಪ್ಪು. ಆ ತಪ್ಪಿನೊಂದಿಗೆ, ಮದುವೆಯಾದ ಹರೆಯದ ಹೆಂಡತಿ, ಸ್ವಾಧಿಕಾರವನ್ನು ಮೆರೆಯಿಸುವಾಗ ಅದಕ್ಕೆ, ಮುದುಕನೆಂದು ಹೇಳಿಸಿಕೊಳ್ಳಲು ಮನಸ್ಸಿಲ್ಲದಿದ್ದರೂ ತಲೆಕೂದಲು ನರೆತಿದ್ದ ತಾನು ಅಡ್ಡ ಬಂದರೆ ಇನ್ನೊಂದು ತಪ್ಪಾದೀತೆಂದು ಮನಸ್ಸಿನಲ್ಲಿ ಭಾವಿಸಿಕೊಂಡನು. ಹೊತ್ತಿಗೆ ಸರಿಯಾಗಿ ಸ್ನಾನ, ಊಟ, ಫಲಾಹಾರ—ದೊರೆತರೆ ಮತ್ತೆ ಎಷ್ಟು ತತ್ವಗಳನ್ನೂ ಆಡಬಲ್ಲ ಭೀಮರಾಯನಿಗೆ, ಕ್ರಮೇಣ ಹೆಂಡತಿಯ ಅಂಕೆಯನ್ನು ಮೀರುವುದು ಕಷ್ಟವಾದುದರಲ್ಲಿ ಯಾರೂ ದೋಷ ಹುಡುಕಬಾರದು. ಇದರಿಂದಾಗಿ ಅವನ ಬಣ್ಣವು ಸಂಪೂರ್ಣ ಬದಲಾಯಿತು. ಮನೋರಮೆಯ ಅಪ್ರೀತಿಗೆ ಪಾತ್ರನಾಗಿದ್ದ ಶ್ಯಾಮನಲ್ಲಿ ಭೀಮರಾಯನಿಗೆ ಇದುವರೆಗಿದ್ದ ಪ್ರೇಮವು, ಪ್ರಾಯವು ಹೆಚ್ಚಿದಂತೆ ಕಡಿಮೆಯಾಗುತ್ತಾ ಬಂತು. ಒಂದನೆಯ ಹೆಂಡತಿ ಸತ್ತು ಎಷ್ಟೋ ವರ್ಷವಾಯಿತು. ಅವಳೊಡನೆ ದಾಂಪತ್ಯ ಸುಖವನ್ನನುಭವಿಸಿದ ಅಂದಿನ ದಿನಕ್ಕೂ, ಇಂದಿಗೂ ಎಷ್ಟೋ ವರ್ಷಗಳ ಅಂತರ! ಇಂದು ಅವಳಾರು? ತಾನಾರು? ಅವಳ ಮಗನು ತನಗೇನಾಗಬೇಕು? ಮನೋರಮೆ ಯೋಗ್ಯತೆಯಲ್ಲಿ ಮೊದಲಿನವಳಿಗಿಂತ ಕಡಿಮೆಯೆ? ಎಂದೆಲ್ಲಾ ತರ್ಕವಿತರ್ಕಗಳನ್ನು ಮನಸ್ಸಿನಲ್ಲೇ ಮಾಡಿದಾಗ, ಎರಡನೆಯ ಮದುವೆಯೆ ಲಾಭಕರವೆಂದು ಅವನಿಗೆ ಕಂಡುಬಂತು. ಆದರೂ ಶ್ಯಾಮನ ನಿಮಿತ್ತವಾಗಿ ಆಗಾಗ ಮನೆಯೊಳಗೆ ನಡೆಯುತ್ತಿದ್ದ ಜಗಳಗಳು ತನ್ನ ನಿತ್ಯದ ತ್ರಿಕರ್ಮಗಳಿಗೆ (ಸ್ನಾನ, ಊಟ, ಫಲಾಹಾರಗಳಿಗೆ) ಕೆಲವೊಮ್ಮೆ ವಿಘ್ನ ತರುತಿದ್ದುವು. ಇದೊಂದು ಬೇಸರವು ಭೀಮರಾಯನ ಎಲ್ಲಾ ಉತ್ಸಾಹಗಳನ್ನೂ ಉರುಳಿಸಿಬಿಡುತ್ತಿತ್ತು.

ಒಂದು ದಿನ ಭೀಮರಾಯನಿಗೆ, ಕಲೆಕ್ಟರರ ಸಂಗಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಂಚಾರಮಾಡುವ ಸಂದರ್ಭ ಬಂತು. ಮನೆಯನ್ನು ಬಿಡದೆ ನಿರ್ವಾಹವಿಲ್ಲ. ಬಿಡುವುದಕ್ಕೆ ಮನಸ್ಸಿಲ್ಲ. ತಾನು ಮನೆಯಲ್ಲಿಲ್ಲದಿದ್ದರೆ, ತಾಯಿಯ ರೋಷದಿಂದ ಮನೋಹರನನ್ನು ಕಾಪಾಡುವವರಾರು? ಚಿಕ್ಕತಾಯಿಯನ್ನು ಪೀಡಿಸಬೇಡೆಂದು ಶ್ಯಾಮನನ್ನು ನಿರ್ಬಂಧದಲ್ಲಿಡುವವರಾರು? ದಿನಕ್ಕೆ ನಾಲ್ಕಾರು ಸಲ ಮೊಲೆಯುಣ್ಣುವುದಕ್ಕೂ ತತ್ಕಾರವಾದ ಕೈಗೂಸಿನ ಕೂಗನ್ನು ಕೇಳಿ, ಓಡಿಬಂದು ಹಿಡಿದುಕೊಳ್ಳು

ವವರಾರು? ಮನೆಗೆಲಸವನ್ನೆಲ್ಲಾ ಒಬ್ಬಳೆ ಮಾಡುವ ಹೆಂಡತಿಯ ಕಷ್ಟಗಳಲ್ಲಿ ಸಹಭಾಗಿಯಾಗುವುದಾರು? ಎಂದು ಮೊದಲಾದ ಯೋಚನೆಗಳು ಹುಟ್ಟಿದುವು. ಆದರೆ ಕಲೆಕ್ಟರರ ಆಜ್ಞೆ! ಎಂದ ಮೇಲೆ ಎಂತಹ ಯೋಚನೆಯೂ ಮೂಲೆಪಾಲನ್ನು ಸೇರಲೇಬೇಕು. ಉಪಾಯಾಂತರವಿಲ್ಲದೆ, ''ಮನೋರಮೆ! ನಾನೀಗ ಹೋಗುತ್ತೇನೆ. ಬರುವಾಗ ಕೆಲವು ದಿವಸಗಳಾಗಬಹುದು. ಮನೆಯಲ್ಲಿ ಬಹಳ ಜಾಗ್ರತೆಯಿಂದಿರು," ಎಂದು ಎಚ್ಚರದ ಮಾತನ್ನು ಹೇಳಿ ಹೊರಟನು. ಮನೋರಮೆಯು, ''ನಿಮ್ಮ ಶ್ಯಾಮನಿರುವಾಗ ಯಾವ ಜಾಗ್ರತೆಯೂ ಬೇಡ" ಎಂದು ತನ್ನ ವ್ಯಂಗ್ಯ ಸಾಮರ್ಥ್ಯವನ್ನು ಹೊರಗೆಡವಿದಳು. ಭೀಮರಾಯನು ಶ್ಯಾಮನನ್ನು ನೋಡಿ, ''ಜಾಗ್ರತೆ! ಶ್ಯಾಮ, ನಾನಿಲ್ಲದಿರುವಾಗ ಎಲ್ಲಿಯಾದರೂ ತಂಟೆಮಾಡಿದೆಯೆಂದು ನನಗೆ ತಿಳಿದುಬಂದರೆ, ಪೆಟ್ಟನ್ನು ಸಹಿಸಬೇಕಾದರೆ ಬೆನ್ನಿಗೆ ಹಾಳೆಕಟ್ಟಿಕೊಳ್ಳಬೇಕು. ತಿಳಿಯಿತೊ?'' ಎಂದು ಎಚ್ಚರಿಕೆಯ ಮಾತನ್ನು ಹೇಳಿ, ಹೊರಟುಹೋದನು.

ತಂದೆಯು ಮನೆಯ ಕಡೆಗೆ ಬೆನ್ನು ತಿರುಗಿಸಿದ್ದೇ ತಡ; ಶ್ಯಾಮರಾಯನ ಮೇಲೆ ಇದುವರೆಗೆ ಹಲ್ಲುಮಸೆಯುತ್ತಿದ್ದ ಮನೋರಮೆಗೆ, ಹಗೆತೀರಿಸುವುದಕ್ಕೆ ಸಂಪೂರ್ಣ ಅವಕಾಶ ಸಿಕ್ಕಿತು. ಮನೋಹರನ 'ದೊಡ್ಡಣ್ಣ'ನು ಇಂದು ಬಲು ದೀನನಾಗಿದ್ದಾನೆ. ಸಣ್ಣ ಪ್ರಾಯದ ಮಕ್ಕಳಲ್ಲಿರುವ ಚಟುವಟಿಕೆ ಶ್ಯಾಮನಲ್ಲಿಯೂ ಇತ್ತು. ಈ ಚಟುವಟಿಕೆಯು ಹಲವೊಮ್ಮೆ ಹಾನಿಮಾಡದ ಸಣ್ಣಪುಟ್ಟ ತಂಟೆಯಾಗಿ ಮಾರ್ಪಡುತಿತ್ತು. ಹೊಡೆದರೂ ಮಾತಾಡದೆ ಕಲ್ಲಿನಂತೆ ಕುಳಿತು ಸಜೀವತೆಯ ಲಕ್ಷಣವನ್ನೆ ತೋರಿಸದಿರುವುದು ಶ್ಯಾಮನ ಸ್ವಭಾವಕ್ಕೆ ವಿರುದ್ಧ. ಹನ್ನೆರಡು ವರ್ಷ ಪ್ರಾಯದ ಹುಡುಗರಲ್ಲಿರಬೇಕಾದ ಎಲ್ಲಾ ಗುಣಗಳೂ, ಕೆಲವು ದೋಷಗಳೂ ಅವನಲ್ಲಿದ್ದುವು. ಇದು ಮನೋರಮೆಗೆ ಸಹನೆಯಾಗಲಿಲ್ಲ. ಪ್ರಾಯ ಹನ್ನೆರಡಾದರೂ ಅರುವತ್ತರ ಗಡಿ ದಾಟಿದವರ ವೈರಾಗ್ಯವಿರಬೇಕೆಂದು ಅವಳ ಕಟ್ಟಪ್ಪಣೆ. ಹೀಗಾಗಿ ತಂದೆ ಹೊರಟಂದಿನಿಂದ, ದೊಡ್ಡಣ್ಣನಿಗೆ ಪೆಟ್ಟು ತಪ್ಪಲಿಲ್ಲ. ತಂದೆಯಿದ್ದಾಗಲೆ ದೊಡ್ಡಣ್ಣನಿಗೆ ಕಣ್ಣೀರಶನ. ಈಗಳಂತೂ ಹೇಳುವುದೇ ಬೇಡ. ಅವನು ಯಾವ ಕೆಲಸ ಮಾಡಿದರೂ ಅದರ ಫಲವಾಗಿ ದೊರೆವುದು ಏಟೇ ಆಗಿತ್ತು. ಮನೆ

ಯೊಳಗೆ ಅದರ ಹೊರತಾಗಿ ಇನ್ನೊಂದು ವಸ್ತು ದೊರೆಯಬಹು ದೆಂದು ಅವನಿಗೆ ಗೊತ್ತಿಲ್ಲ. ಶ್ಯಾಮನ ಮೇಲೆ, ನಡೆದ ಮತ್ತು ನಡೆಯುವ ಅಪರಾಧಗಳನ್ನು ಹೊರಿಸುವವಳೂ ಮನೋರಮೆ; ಸಾಕ್ಷ್ಯ ಹೇಳು ವವಳೂ ಅವಳೆ; ದಂಡನೆಮಾಡುವ ನ್ಯಾಯಾಧೀಶಪದವಿಯೂ ಅವಳಿಗೇ! ತಾಯಿಯಿಲ್ಲದ ಹುಡುಗನ ಮೇಲೆ ಹಗೆತೀರಿಸುವುದಕ್ಕಾಗಿ ಮಾತ್ರ ತಾನು ಲೋಕದಲ್ಲಿ ಜನನಕ್ಕೆ ಬಂದುದೆಂಬಂತೆ ಮನೋರಮೆಯು ಆಡುತ್ತಾಳೆ. ಆಡಿದಂತೆ ಕೆಲಸದಲ್ಲೂ ಮಾಡುತ್ತಾಳೆ. ಒಮ್ಮೊಮ್ಮೆ ನೆರೆಹಿತ್ತಿಲಿಂದ ಮಾವಿನಕಾಯಿಗಳನ್ನು ಕದ್ದ ಸುದ್ದಿ ಬರುವುದು; ದೊಡ್ಡಣ್ಣನ ಮೈಯಲ್ಲಿ ಮಾವಿನಕಾಯಿಗಳಷ್ಟೆ ದೊಡ್ಡ ಗಾಯಗಳೇಳುವುವು. ಮಸಿ ಚೆಲ್ಲಿದ ಕಥೆ ಬರುವುದು; ದೊಡ್ಡಣ್ಣನ ಮುಖದಮೇಲೆ ಮಸಿಯಾಗುವುದು. ಗಡಿ ಯಾರದ ತಿರುಗಣೆಯನ್ನು ತಿರುಗಿಸಿ ಹಾಳುಮಾಡಿದ ಇತಿಹಾಸವು ಹೊರಡುವುದು. ಗಡಿಯಾರದ ತಿರುಗಣೆಯ ಅನುಭವವು ಕಿವಿಗೆ ದೊರೆ ವುದು; ದೂರುಗಳಲ್ಲಿ ಮುಕ್ಕಾಲುಪಾಲು ಮನೋರಮೆಯ ಕಲ್ಪನಾಬಲ ದಿಂದ ಹುಟ್ಟಿದುವು. ಕೆಲಕೆಲವು ನಿಜವಾದುವು. ಸಣ್ಣ ಪ್ರಾಯಕ್ಕೆ ಭೂಷಣವಾದುವು. ಆದರೆ ಮನೆಯೊಳಗೆ ಸಣ್ಣ ಪ್ರಾಯದವರು ಹುಟ್ಟ ಬಾರದು. ಅಡಸಿದ ಮೈ, ನರೆತ ಕೂದಲಿನವರಿದ್ದರೆ ಮಾತ್ರ ಮನೆಯು ಮನೆಯೆಂಬುದೆ ಅವಳ ತಿಳಿವಳಿಕೆ. ಎಳೆತನದ ರಕ್ತವು ಹರಿದೋಡು ವಾಗ ಮಾಡುವ ನೂರಾರು ತಂಟೆಗಳು ಜೀವನದ ಉಲ್ಲಾಸದ ಚಿಹ್ನೆ ಗಳೆಂದೂ, ಮುಪ್ಪಿನ ವೈರಾಗ್ಯ, ಸ್ಮಶಾನವೈರಾಗ್ಯವೆಂದೂ ಅವಳು ಒಪ್ಪ ಲಾರಳು.

ಭೀಮರಾಯನು ಸಂಚಾರವನ್ನು ಮುಗಿಸಿ, ಇನ್ನೂ ಮನೆಗೆ ಬರ ಲಿಲ್ಲ. ಇದಕ್ಕೆ ದೊಡ್ಡಣ್ಣನ ದುರ್ದೈವವು ಇನ್ನೂ ಮುಗಿಯದುದೇ ಕಾರಣವಾಗಿರಬೇಕು. ಒಂದು ದಿನ ಶ್ಯಾಮನು ಸಾಯಂಕಾಲ ಶಾಲೆ ಯಿಂದ ಬರುವಾಗ ಸ್ವಲ್ಪ ತಡವಾಗಿತ್ತು. ರಾತ್ರಿ ಏಳು ಘಂಟೆಯವರೆಗೆ ಮನೋರಮೆ ಅವನನ್ನು ಎದುರುನೋಡಿದಳು. 'ಬಂದೆಯೊ ಮಗನೆ' ಎಂದು, ಸವಿಮಾತುಗಳನ್ನಾಡುವುದಕ್ಕಲ್ಲ. ಬಾಕಿ ಉಳಿದ, ದಿನದ ಕಾರ್ಯಕ್ರಮವನ್ನು ಪೂರ್ತಿಗೊಳಿಸುವುದಕ್ಕೆ! ಆದರೂ ಶ್ಯಾಮನ ಸುಳಿ ವಿಲ್ಲ. ಮನೋಹರನನ್ನು ಊಟಕ್ಕೆ ಕರೆದಳು. ದೊಡ್ಡಣ್ಣನೊಡನೆ

ಊಟವನ್ಮಾಡಬೇಕೆಂದು ಅವನು ಹಟಹಿಡಿದನು. ಸಿಟ್ಟಿಂದರೆ ಮನೋರಮೆಯ ಒಡಹುಟ್ಟಿದ್ದು. ಹುಡುಗನನ್ನು ದರದರನೆ ಎಳೆದುತಂದು ಎಲೆಯ ಬಳಿಯಲ್ಲಿ ದಡಮ್ಮನೆ ಇರಿಸಿದಳು. ಬಾಯಿಗೆ ಅನ್ನವನ್ನು ತುರುಕಿದಳು. ಮನೋಹರನು ಎರಡು ತುತ್ತು ಅನ್ನವನ್ನು ನುಂಗುವ ಮಧ್ಯದಲ್ಲಿ ಸಾಧ್ಯವಾದಷ್ಟು ಅಳದೆ ಬಿಡಲಿಲ್ಲ. ಉಣಿಸುವ ಅನ್ನದ ರುಚಿಯನ್ನು ಹೆಚ್ಚಿಸುವುದಕ್ಕೆಂಬಂತೆ ಬೆನ್ನಮೇಲೆ ಮಧ್ಯಮಧ್ಯದಲ್ಲಿ ತಾಯಿಯ ಹೊಡೆತವೂ ಬೀಳದಿರಲಿಲ್ಲ. ಊಟವಾಗುವಾಗ ಮನೋಹರನಿಗೆ ಸಹಿಸಲಾರದ ಆಯಾಸ; "ನಿದ್ದೆ ಬರುತ್ತದೆ ನನಗೆ; ಹಾಸಿಗೆಯನ್ನು ಹಾಕಿಕೊಡು," ಎಂದು ತಾಯಿಯೊಡನೆ ಕೇಳಿದುದಕ್ಕೆ, "ಎಲ್ಲಾದರೂ ಒಂದು ಮೂಲೆಯಲ್ಲಿ ಬೀಳು. ಅಷ್ಟು ಅವಸರವೇನು? ನಾನೂ ಊಟಮಾಡಿಕೊಳ್ಳುತ್ತೇನೆ," ಎಂದು ಅವಳು ತನ್ನ ಉದರದ ಅರ್ಚನಾ ದ್ರವ್ಯವನ್ನು ಎಲೆಯ ಮೇಲೆ ಇಕ್ಕಿದಳು. ಇತರ ಕೆಲಸಗಳಂತೆ ಊಟಮಾಡುವುದರಲ್ಲಿಯೂ ಮನೋರಮೆಯ ವೇಗ ಹೆಚ್ಚು. ಕುಳಿತದ್ದೇ ತಡ; ಎಲೆಯಿಂದ ಎದ್ದಾಯಿತು. ಉಳಿದ ಕೆಲಸಗಳನ್ನು ನಿಮಿಷದಲ್ಲಿ ಮಾಡಿ ಊಟಕ್ಕೆ ಕುಳಿತಲ್ಲೆ ನಿದ್ದೆಹೋಗಿದ್ದ ಮನೋಹರನನ್ನು ಹಾಸಿಗೆಯ ಮೇಲೆ ಮಲಗಿಸಿದಳು. ತಾನೂ ಒಂದು ಚಾಪೆ ಹಾಕಿಕೊಂಡಳು. ಅಂಗಳದ ಕಡೆಯ ಬಾಗಿಲನ್ನು ಬಿಗಿದಳು. "ಆ ಮಾರಿ ಬಾರದಿದ್ದರೆ ಸಾಯಲಿ," ಎಂದು, ದೀಪವನ್ನು ನಂದಿಸಿದಳು.

ಒಂದು ಗಂಟೆ ಕಳೆದುಹೋಯಿತು. ಶ್ಯಾಮನು ಚಿಕ್ಕತಾಯಿಯು ಏನೆನ್ನುವಳೋ ಎಂಬ ಭೀತಿಯಿಂದ ಗಡಗಡನೆ ನಡುಗುತ್ತಾ ಮನೆಯ ಬಾಗಿಲವರೆಗೆ ಬಂದನು. ಬಾಗಿಲು ಹಾಕಿತ್ತು. ಬಾಗಿಲು ಹೊಡೆದು ಸದ್ದುಮಾಡುವುದಕ್ಕೆ ಧೈರ್ಯ ಸಾಲದು. ಹೊರಗೆ ಮಲಗೋಣವೆಂದರೆ, ತಿಂದಷ್ಟು ಹಸಿವಾಗುವ ಪ್ರಾಯದಲ್ಲಿ ಅವನ ಹೊಟ್ಟೆ ಕೇಳಲಿಲ್ಲ. ಚಿಕ್ಕತಾಯಿಯನ್ನು ಎಬ್ಬಿಸುವುದರ ಪರಿಣಾಮವು ಅವನಿಗೆ ಗೊತ್ತಿತ್ತು. ಅಂತೂ ಇಂತೂ, ಎದೆಯನ್ನು ಗಟ್ಟಿಮಾಡಿ ಬಾಗಿಲನ್ನು ಹೊಡೆದನು. ಚಿಕ್ಕತಾಯಿಯನ್ನು ಕರೆದನು. ಸುಮಾರು ಅರ್ಧಗಂಟೆಯವರಗೆ ಕರೆ, ಕೂಗು, ಬಾಗಿಲಹೊಡೆತಗಳ ಪರ್ಯಾಯವು ಆದ ಮೇಲೆ ಒಳಗಣಿಂದ, "ಯಾರದು?" ಎಂಬ ಕರ್ಣಕಠೋರಗರ್ಜನೆಯೊಂದು ಕೇಳಿಬಂತು.

ಶ್ಯಾಮನು ನಡುಗದನಿಯಿಂದ, "ನಾನು!" ಎಂದನು.

"ನಾನೆಂದೊ ನಿನ್ನ ಹೆಸರು?"

"ನಾನು, ಚಿಕ್ಕ ತಾಯಿ............ಶ್ಯಾಮ............

"ಬೇಕಾದ ಹಾಗೆ ಬಂದು ಬಾಗಿಲು ಹೊಡೆಯುವುದಕ್ಕೆ ಇದೇನು ಹೊಟೇಲೋ"

"ಅಲ್ಲ, ತಾಯಿ, ಶಾಲೆಯಲ್ಲೊಂದು ಕೂಟವಿತ್ತು. 'ನಾನು ನಿಂತುಕೊಳ್ಳುವುದಿಲ್ಲ; ಚಿಕ್ಕ ತಾಯಿಗೆ ತೊಂದರೆಯಾದೀತು' ಎಂದು ಹೇಳಿದೆ. ಉಪಾಧ್ಯಾಯರು ಕೇಳಲಿಲ್ಲ; ನಿಲ್ಲಬೇಕೆಂದರು."

"ಉಪಾಧ್ಯಾಯರ ಮನೆಗೆ ಊಟಕ್ಕೆ ಹೋಗದೆ ಇಲ್ಲಿ ಯಾಕೆ ಬಂದೆ?"

"ಕ್ಷಮಿಸು, ಚಿಕ್ಕಮ್ಮ; ಇನ್ನು ಮುಂದೆ ತಡಮಾಡಿ ಬರುವುದಿಲ್ಲ."

"ನಿನ್ನ ತಂದೆಯಲ್ಲಿ ಮೊದಲೇ ಸಾರಿ ಹೇಳಿದ್ದೆ; ನಿನ್ನ ಮಗನೆಂದರೆ ನನ್ನನ್ನು ಹಿಡಿದ ಪಿಶಾಚಿಯೆಂದು."

"ಇಲ್ಲ, ತಾಯಿ! ಇಂದು ಒಂದು ಸಲ ಮಾಫಿಮಾಡು, ಇನ್ನು ಮುಂದೆಯೂ ಹೀಗೆಯೆ ಮಾಡಿದರೆ, ಹೇಗೆ ಬೇಕಾದರೂ ಮಾಡು."

"ಒಂದೊ ನಾನು ಸಾಯಬೇಕು; ಇಲ್ಲದಿದ್ದರೆ ನೀನು ಸಾಯಬೇಕು; ಹೀಗಾಗದೆ ನಿನ್ನ ತಂದೆಗೆ ಬುದ್ಧಿ ಬರಲಿಕ್ಕಿಲ್ಲ," ಎಂದು ಯಾವ ಯೋಚನೆಯಿಂದಲೋ ಮೂರನೆಯ ಸ್ಥಾಯಿಯಲ್ಲಿದ್ದ ಸ್ವರವನ್ನು ಸ್ವಲ್ಪ ತಗ್ಗಿಸುತ್ತಾ ಚಿಕ್ಕ ತಾಯಿಯು ಬಾಗಿಲು ತೆರೆದಳು. ಈ ಹೊತ್ತಿನ ಕಾರ್ಮೋಡ ನಾಲ್ಕಾರು ಹನಿ ಸಿಡಿಸಿ ಮಾಯವಾಯಿತು; ಎಂದು ಮನಸ್ಸಿನಲ್ಲೆ ಬಗೆಯುತ್ತಾ, ಶ್ಯಾಮನು ಮನೆಯನ್ನು ಪ್ರವೇಶಿಸಿದನು. ಮನೆಯನ್ನು ಹೋಗುವುದಕ್ಕೆ ಚಿಕ್ಕ ತಾಯಿಯು ಒಪ್ಪಿಗೆ ಸಿಕ್ಕಿದುದೇ ದೊಡ್ಡದೆಂದು ಎಣಿಸುತ್ತಿದ್ದ ಅವನ ಹೊಟ್ಟೆಯು, ಒಲೆಯ ಮೇಲಿನ ಎಸರಂತೆ ಕುದಿಯುತ್ತಿದ್ದರೂ, "ನನಗೇನು ಹಸಿವೆಯಿಲ್ಲ, ತಾಯಿ. ಊಟಮಾಡದಿದ್ದರೂ ಆಗಬಹುದು," ಎಂದನು. "ನಿನಗಾಗಿ ಇಟ್ಟ ಅನ್ನವನ್ನು ನಾಳೆ ತಂಗಳುಮಾಡಿ ಯಾರು ತಿನ್ನುತ್ತಾರೆ? ಹೋಗು; ಕೈಕಾಲು ತೊಳೆದುಕೊಂಡು ಬಾ; ಈ ಎಲೆಯಲ್ಲಿ ಇಕ್ಕುತ್ತೇನೆ. ಹಸಿವು ಇದ್ದಷ್ಟು ಊಟಮಾಡಿ ಮಲಗಿಕೊ," ಎಂದು, ಶ್ಯಾಮನು ಬಾವಿಕಟ್ಟೆಗೆ ಹೋಗಿ

ಬರುವುದರೊಳಗೆ, ಅವನ ಊಟಕ್ಕಾಗಿ ಬಡಿಸಿ ಇಟ್ಟಿದ್ದಳು. "ಶ್ಯಾಮಾ, ಊಟಮಾಡಿ ಎಂಜಲನ್ನು ಸಾರಿಸಿಬಿಡು, ನಾನು ಮಲಗುತ್ತೇನೆ," ಎಂದು ತನ್ನ ಸಜ್ಜೆಮನೆಗೆ ಹೋದಳು. ಶ್ಯಾಮನಿಗೆ ಊಟ ಸಿಕ್ಕಿದುದಕ್ಕಿಂತಲೂ, ಚಿಕ್ಕ ತಾಯಿಯ ಮೆದುಮಾತಿನಿಂದ ಹೆಚ್ಚು ಸಂತೋಷವಾಯಿತು. ಆದರೆ ಚಿಕ್ಕ ತಾಯಿಯ ಎಂದಿಲ್ಲದ ಮಾರ್ದವಕ್ಕೆ ಕಾರಣವೇನೆಂದು ಅವನಿಗೆ ತಿಳಿದಿರಲಿಲ್ಲ. ಚಿಕ್ಕ ತಾಯಿಯ ಅನುಗ್ರಹ ಸಂಪಾದನೆಗಿಂತ ಹೆಚ್ಚಿನ ಧ್ಯೇಯವು ಅವನಿಗೆ ಗೊತ್ತಿಲ್ಲ. ಊಟ ತೀರಿಸಿ, ಅವಳು ಹೇಳಿದಂತೆ ಎಂಜಲೆಲೆಯನ್ನು ತೆಗೆದು ನೆಲವನ್ನು ಸಾರಿಸಿ ತನ್ನ ಹಾಸಿಗೆಯಲ್ಲಿ ಬಂದುಬಿದ್ದನು. ಚಿಕ್ಕ ತಾಯಿಯ ಮೆದುಮಾತನ್ನು ಕೇಳಿದ ದಿನವಾದ್ದರಿಂದ ಶ್ಯಾಮನಿಗೆ ಆ ರಾತ್ರಿ ಒಳ್ಳೆಯ ನಿದ್ದೆ!

೩

ಮರುದಿನ ಮುಂಜಾನೆ ಮನೋರಮೆ ಎದ್ದಿದ್ದಾಳೆ. ಯಾವಾಗಲೂ ಬೇಗನೆ ಏಳುವ ಸ್ವಭಾವ ಅವಳದು. ನಿನ್ನೆಯ ರಾತ್ರಿಯಂತೂ ನಿದ್ದೆಯಿಲ್ಲ. ಕಣ್ಣಿನಲ್ಲಿ ಬೆಳಗಾಗಿತ್ತು. ಸಂಸಾರ ಸಣ್ಣದಾದರೂ, ಸಣ್ಣದಲ್ಲದ ಗೃಹಕೃತ್ಯದಲ್ಲಿ ಪ್ರಾರಂಭಿಸಿದ್ದಾಳೆ. ಅಂಗಳಕ್ಕೆ ಬಿಸಿಲು ಬಂದಿದೆ. ನೆರೆಹೊರೆಯ ಮನೆಗಳಲ್ಲೆಲ್ಲಾ, ಬೇಗನೆ ಸಿಕ್ಕುವ ಊಟ ಅಥವಾ ಫಲಾಹಾರದ ಚಿಹ್ನೆಯಾದ ಹೊಗೆಯು ಮನೆಮಾಡಿನಿಂದ ಆಕಾಶಕ್ಕೆ ಏಳುತ್ತಿದೆ. ದೊಡ್ಡವರು ತಂತಮ್ಮ ಕೆಲಸಕ್ಕೆ, ಮಕ್ಕಳು ತಂತಮ್ಮ ತಂಟೆಗೆ, ಪ್ರಾರಂಭಮಾಡಿದ್ದಾರೆ. ಎಲ್ಲಾ ಕಡೆಗಳಲ್ಲಿಯೂ ಉತ್ಸಾಹ, ಚೈತನ್ಯ, ಆನಂದಗಳ ಲಕ್ಷಣಗಳು. ಆದರೆ, ಮನೋರಮೆಯ ಮನೆಯೊಳಗೆ ಅದೊಂದೂ ಇಲ್ಲ. ಮನೋಹರನು ಏಳಲಿಲ್ಲ. ತಡಮಾಡಿ ಏಳುವುದು ಅವನ ಪದ್ಧತಿ. ರಾತ್ರಿಯಲ್ಲಿ ಮಲಗಿದ್ದ ಹಾಸಿಗೆಯನ್ನು ಬಿಟ್ಟು, ಹತ್ತು ಅಡಿ ಆಚೆ, ಭೂಶಯ್ಯೆಯೆಲ್ಲವನ್ನೂ ಅವನು ಆಕ್ರಮಣಮಾಡುತ್ತಿದ್ದಾನೆ; ಗೊರಕೆಹೊಡೆಯುತ್ತಾನೆ. ದಿನಂಪ್ರತಿ ಎಲ್ಲರೂ ಏಳುವುದಕ್ಕಿಂತ ಮುಂಚೆ ಎದ್ದು, ದಿನಚರ್ಯೆಯಲ್ಲಿ ತೊಡಗುವ ಹುಡುಗ ಶ್ಯಾಮನು ಮಲಗಿದ ಕೋಣೆ ನಿಶ್ಶಬ್ದವಾಗಿದೆ. ಮನೋರಮೆಗೆ ಕೆಲಸದ ಗಡಿಬಿಡಿ, ಶ್ಯಾಮನ ಕೋಣೆಯ ಬಳಿ ಅವಳು ಬರಲೇ ಇಲ್ಲ. ಭೀಮರಾಯನು ಮನೆಯಲ್ಲಿರುತ್ತಿದ್ದರೆ.

ಶ್ಯಾಮನ ಮೆಯ್ಯನ್ನು ಕುಲುಗಿಸಿ ಎಬ್ಬಿಸುತ್ತಿದ್ದ; ಆದರೆ ಅವನು ಇಲ್ಲವಾದ ಕಾರಣ, ಶ್ಯಾಮನೇಕೆ ಏಳಲಿಲ್ಲವೆಂದು ವಿಚಾರಿಸುವವರಿಲ್ಲ.

ಮನೋಹರನು ನೆಲದ ಮೇಲೆ ಆಚೆ ಈಚೆ ಹೊರಳಾಡಿ, ಫಕ್ಕನೆ ಬೆಚ್ಚಿಬಿದ್ದವನಂತೆ ಎದ್ದು, "ದೊಡ್ಡಣ್ಣಾ!" ಎಂದು ಕೂಗಿದನು. ಮುಂಜಾನೆ ಎದ್ದಕೂಡಲೆ ಕಲ್ಪವೃಕ್ಷವನ್ನು ನೋಡಬೇಕೆಂದು ಹಳಬರು ಹೇಳುತ್ತಾರೆ. ಮನೋಹರನು ಹಾಗೆ ಮಾಡುತ್ತಿದ್ದ. ಆದರೆ ಅವನ ಕಲ್ಪವೃಕ್ಷವು ತೆಂಗಿನ ಮರವಲ್ಲ! "ದೊಡ್ಡಣ್ಣ!!"

• ಮನೋಹರನ ಕೂಗನ್ನು ಬಳಿಯಲ್ಲಿ ಹೋಗುತ್ತಿದ್ದ ಮನೋರಮೆ ಕೇಳಿದಳು. "ನೋಡು! ನಿನ್ನ ದೊಡ್ಡಣ್ಣನಿಗೆ ಏಳುವುದಕ್ಕೆ ಸಮಯವೇ ಆಗಲಿಲ್ಲ! ಇನ್ನೂ ಮಲಗಿದ್ದಾನೆ. ಹೊತ್ತು ಮೂಡಿ ಹತ್ತು ಗಳಿಗೆಯಾಯಿತು," ಎಂದಳು.

"ನಿನ್ನೆ ರಾತ್ರಿ ದೊಡ್ಡಣ್ಣ ಬಂದುದು ನನಗೆ ಗೊತ್ತಿಲ್ಲ. ಹೋಗಿ ಎಬ್ಬಿಸುತ್ತೇನೆ," ಎಂದು ಶ್ಯಾಮನ ಕೋಣೆಯ ಕಡೆಗೆ ಓಡಿಬಂದನು. ಬಂದವನೆ ಅವನ ಹಾಸಿಗೆಯ ಮೇಲೆ ಬಿದ್ದು, "ದೊಡ್ಡಣ್ಣಾ! ದೊಡ್ಡಣ್ಣಾ! ಗಂಟೆ ಒಂಬತ್ತಾಯಿತು. ಏಳು! ಏಳು!" ಎಂದು ಮೈಯನ್ನು ಕುಲುಕಿದನು. ದೊಡ್ಡಣ್ಣನು ಏಳಲಿಲ್ಲ. ಕೈಯನ್ನು ಹಿಡಿದೆಳೆದನು. ದೊಡ್ಡಣ್ಣನು ಮಿಡುಕಾಡುವ ಲಕ್ಷಣವನ್ನು ತೋರಿಸಲಿಲ್ಲ. "ದೊಡ್ಡಣ್ಣಾ! ದೊಡ್ಡಣ್ಣಾ!" ಎಂದು ಶಕ್ತಿಯಿದ್ದಷ್ಟು ಬೊಬ್ಬೆಹೊಡೆದನು. ದೊಡ್ಡಣ್ಣನ ಕಿವಿ ಕಿವುಡಾಗಿತ್ತು. ಅವನ ಮೈಮೇಲೆ ಬಿದ್ದು ಹೊರಳಾಡಿದನು. ದೊಡ್ಡಣ್ಣನ ಮೈ ಶೀತದಿಂದ ಕೊರೆಡಿಹೋಗಿತ್ತು.

"ತಾಯೀ! ತಾಯೀ! ದೊಡ್ಡಣ್ಣನಿಗೆ ಏನಾಯಿತು ನೋಡು!" ಎಂದು ಮನೋಹರನು ಬೊಬ್ಬೆಹೊಡೆದನು. ಮನೋರಮೆ ಬೆದರಿ ಬೆದರಿ ಅಲ್ಲಿಗೆ ಬಂದಳು. ಮನೋಹರನನ್ನು ಸಂತೈಸುವುದಕ್ಕಾಗಿ ಹುಡುಗನ ದೇಹವನ್ನು ಮುಟ್ಟಿನೋಡಿದಳು. ಮುಸುಕನ್ನು ತೆರೆದು, ಮುಖವನ್ನು ಅವಲೋಕಿಸಿದಳು. ಮನೋಹರನು ಅವಸರದಲ್ಲಿ, "ಯಾಕೆ ತಾಯಿ, ದೊಡ್ಡಣ್ಣನು ಏಳುವುದಿಲ್ಲ?" ಎಂದು ಮತ್ತೂ ಮತ್ತೂ ಕೇಳಿದನು. ಅವಳು, "ಮಗೂ, ಇಲ್ಲಿ ಬಾ; ಒಂದು ಮಾತನ್ನು ಹೇಳುತ್ತೇನೆ," ಎಂದು ಹುಡುಗನನ್ನು ಅಲ್ಲಿಂದ ಕರೆದುಕೊಂಡು ಹೋಗುವುದಕ್ಕೆ

ಯತ್ನಿಸಿದಳು. ಆಗ ಅವನು, "ದೊಡ್ಡಣ್ಣನು ಏಳಲಿಲ್ಲ; ನನಗೆ ಬೇಸರ ವಾಗುತ್ತದೆ; ನಾನು ಬರುವುದಿಲ್ಲ," ಎಂದನು. ಮನೋಹರನು ಕುಳಿತಲ್ಲಿಂದ ಕದಲಲಿಲ್ಲ. ಮನೋರಮೆಗೆ ಏನು ಮಾಡಬೇಕೆಂದು ತೋರ ಲಿಲ್ಲ. ಇನ್ನೊವ್ಮೆ ಮುಸುಕನ್ನೆತ್ತಿ ನೋಡಿದಳು. ನೋಡಿ, ಇದುವರೆಗೆ ಬಾರದ ಉದ್ವೇಗವನ್ನು ಈಗ ಒಮ್ಮೆಲೇ ತರಿಸಿಕೊಂಡು, "ಅಯ್ಯೋ, ನಮ್ಮ ಹುಡುಗ ಮಾತಾಡುವುದಿಲ್ಲ! ಬನ್ನಿರಿ! ಬನ್ನಿರಿ!" ಎಂದು ಉಚ್ಚ ಸ್ವರದಿಂದ ಕೂಗಿದಳು. ಆಗ ಫಕ್ಕನೆ ಆ ಕೋಣೆಯ ಬಾಗಿಲು ತೆರೆಯಿತು. "ಏನು, ಮನೋರಮೆ, ಇದು?" ಎಂದು ಭೀಮರಾಯನೆ ಆವಳ ಮುಂದೆ ನಿಂತ. ಮನೋರಮೆಯ ದುಃಖಾವೇಶ ಹೆಚ್ಚಿತು. "ನಿನ್ನೆ ರಾತ್ರಿಯ ವರೆಗೂ ಏನೂ ಇರಲಿಲ್ಲ. ಹೊಟ್ಟೆತುಂಬ ಉಂಡು ಮಲಗಿದ್ದ! ಅಯ್ಯೋ, ನನ್ನ ಪ್ರಾರಬ್ಧವೇ!" ಎಂದು, ಭೀಮನ ಹೆಚ್ಚಿನ ಪ್ರಶ್ನೆಗಳಿಗೆ ಆಸ್ಪದವಿಲ್ಲದಂತೆ, ತನ್ನ ದುಃಖದೊಡನೆ ಮಾತನ್ನು ಬೆರಸಿದಳು. ಭೀಮನು, "ಬೊಬ್ಬೆಹೊಡೆಯಬೇಡ," ಎಂದು ಹೇಳಿದ್ದೆ ತಡ; "ಅಯ್ಯೋ, ಮಗನೆ, ನಿನಗೇನಾಯಿತು ಕಂದ! ತಾಯಿಯಿಲ್ಲದ ಮಗು! ನನ್ನ ಕೈಗೆ ಸಿಕ್ಕುವಾಗ ಅಂಬೆಗಾಲಿನ ಶಿಶುವಾಗಿತ್ತು! ಇದುವರೆಗೆ ಸಾಕಿದೆ, ಇನ್ನು ನೋಡುವ ಪುಣ್ಯವಿಲ್ಲವಾಯಿತು," ಎಂದು, ಇದುವರೆಗೆ ಕಟ್ಟಿತಂದ ದುಃಖದ ಹೊರೆಯನ್ನು ಒಂದೇ ಸಲ ಚೆಲ್ಲಿಬಿಟ್ಟಳೋ ಎಂಬಂತೆ, ಪ್ರಲಾಪಿ ಸುವುದಕ್ಕೆ ತೊಡಗಿದಳು. ಕಣ್ಣೀರು ಧಾರೆಧಾರೆಯಾಗಿ ಸುರಿಯಿತು. ಎದೆಯು ಒತ್ತುವ ತಿದಿಗಿಂತಲೂ ಹೆಚ್ಚು ಬುಸುಗುಟ್ಟಿ, ಗಾಳಿಯನ್ನು ಹೊರಸೂಸಿತು. ತನ್ನ ನಿರ್ದೋಷಿತ್ವವನ್ನು ಹೇಳುವುದಕ್ಕಲ್ಲದೆ ಬೇರೆ ಯಾವುದನ್ನು ಹೇಳುವುದಕ್ಕೂ ಅವಳಿಗೆ ಮಾತೇ ಬಾರದಂತಾಯಿತು.

ಅಷ್ಟರಲ್ಲಿ ಭೀಮರಾಯನು ಹುಡುಗನ ಮೈಯನ್ನು ಬೇಕಾದ ರೀತಿ ಯಲ್ಲಿ ಪರೀಕ್ಷೆಮಾಡಿದನು. ತಾಯಿಯಂತೆ ಅಳುವುದರಲ್ಲಿ ಅರ್ಥವಿಲ್ಲ ವೆಂದು ಮನೋಹರನು ತಂದೆಗೆ ಸಹಾಯಮಾಡುತ್ತಾ, ಆಗಾಗ, "ಏನಾ ಯಿತಪ್ಪಾ! ಏಕೆ ಅಣ್ಣನು ಏಳುವುದಿಲ್ಲ?" ಎಂದು ಮಧ್ಯಮಧ್ಯದಲ್ಲಿ ಕೇಳುತ್ತಿದ್ದನು. ಮನೋರಮೆಯು ಗೋಳಿಡುತ್ತಾ ಸ್ಮೃತಿಯಿಲ್ಲದಂತೆ ಬಳಿಯಲ್ಲಿ ಬಿದ್ದಿದ್ದಳು. ಕೊನೆಗೆ ಭೀಮರಾಯನು ಕಣ್ಣೀರನ್ನು ತುಂಬಿ, "ನಿನಗಿನ್ನು ದೊಡ್ಡಣ್ಣನಿಲ್ಲ ಮನು!" ಎಂದು ಗದ್ಗದವಾಣಿಯಿಂದ ಹೇಳಿ

ದನು. ಈ ಮಾತನ್ನು ಕೇಳಿದ್ದೇ ತಡ, ಮನೋಹರನ ದುಃಖದ ತಂತಿಯನ್ನು ಮೀಟಿದಂತಾಯಿತು. "ದೊಡ್ಡಣ್ಣಾ! ದೊಡ್ಡಣ್ಣಾ!" ಎಂದು ಅವನು ಅತ್ತು ಅಳುವನ್ನು ಕೇಳಿ ದಾರಿಹೋಕರೂ, ನೆರೆಹೊರೆಯವರೂ ಬಂದು, "ಏನಾಯಿತು, ರಾಯರೇ?" ಎಂದು, ಕಿವಿಯಿಂದ ಕಿವಿಗೆ ಕೇಳಲಾರದ ಪ್ರಶ್ನೆಯನ್ನು ಮಾಡಿದರು. ಪ್ರಶ್ನೆಗೆ ಮಾತಿನ ಉತ್ತರವು ಬೇಕಾಗಿರಲಿಲ್ಲ. ಹಾಸಿಗೆಯಲ್ಲಿ ಶ್ಯಾಮನ ನಿಷ್ಪಂದ ದೇಹ. ಬಳಿಯಲ್ಲಿ ಮನೋರಮೆಯ ದುಃಖಾಭಿನಯ; ಇದಿರಲ್ಲಿ, ಏನುಮಾಡುವುದೆಂದು ತಿಳಿಯದೆ, ಕಲ್ಲಿನಮೂರ್ತಿಯಂತೆ ನಿಂತಿದ್ದ ಭೀಮರಾಯನ ಉದ್ದ ತೋರದ ಆಕಾರ; ಇವನ್ನೆಲ್ಲಾ ನೋಡಿದವರಿಗೆ ವರ್ತಮಾನವು ಏನೆಂದು ತಿಳಿಯುವುದಕ್ಕೆ ಕಷ್ಟವೇ ಆಗಲಿಲ್ಲ.

ದಾರಿಯಲ್ಲಿ ಹಾದುಹೋಗುವ ಯಾರೋ ಒಬ್ಬ ಡಾಕ್ಟರರು ಒಳಗಿನ ಗುಲ್ಲನ್ನು ಕೇಳಿ, ಭೀಮರಾಯನ ಪರಿಚಯವಿದ್ದುದರಿಂದ, ಓಡುತ್ತೋಡುತ್ತಾ ಕೋಣೆಯೊಳಗೆ ಬಂದರು. "ಭೀಮರಾಯರೇ, ನನ್ನಿಂದೇನಾಗಬೇಕು?" ಎಂದು ಕುತೂಹಲದಿಂದ ಕೇಳಿದರು. ಇದೇ ಸಂದರ್ಭವೆಂದು, ಮನೋರಮೆಯ ಬಿಕ್ಕುಮಾತಿಗೆ ಪ್ರಾರಂಭವಾಯಿತು. ಭೀಮರಾಯನು ಒಮ್ಮೆ ಅವಳನ್ನೂ, ಒಮ್ಮೆ ಡಾಕ್ಟರರನ್ನೂ ನೋಡುತ್ತಾ, ಮನೋರಮೆಯ ಮಾತಿಗೆ ಮೂಕತೆಯಿಂದ ಸಮ್ಮತಿಕೊಟ್ಟನು. ಡಾಕ್ಟರರು ಹುಡುಗನನ್ನು ಬಲುಬಗೆಯಿಂದ ಪರೀಕ್ಷೆಮಾಡಿದರು. ಹತ್ತೆಂಟು ಪ್ರಶ್ನೆಗಳನ್ನು ಹಾಕಿ, ಮನೋರಮೆಯ ಮುಖದಿಂದ ತಿಳಿಯಬಹುದಾದ್ದನ್ನು ತಿಳಿದುಕೊಂಡರು. ಕೆಲವು ನಿಮಿಷಗಳ ವರೆಗೆ ಸುಮ್ಮನೆ ಆಕಾಶವನ್ನು ನೋಡುತ್ತಾ ನಿಂತಿದ್ದು, ಮತ್ತೆ, "ಭೀಮರಾಯರೆ! ಸ್ವಲ್ಪ ಈ ಕಡೆಗೆ ಬನ್ನಿರಿ," ಎಂದು, ಕೋಣೆಯಿಂದ ಹೊರಗೆ ನಾಲ್ಕಾರು ಮಾರು ದೂರಕ್ಕೆ ಅವನನ್ನು ಕರೆದುಕೊಂಡುಹೋದರು. ಭೀಮರಾಯನು ಗದ್ಗದಕಂಠದಿಂದ, "ಡಾಕ್ಟರರೆ, ಹುಡುಗನನ್ನು ಬದುಕಿಸುವ ಮಾರ್ಗವಿದ್ದರೆ ಹೇಳಿರಿ, ಸ್ವಾಮಿ!" ಎಂದನು. ಡಾಕ್ಟರರು, "ಸಮಯವು ಮೀರಿಹೋಯಿತು. ಬಹಳ ವ್ಯಸನವಾಗುತ್ತದೆ," ಎಂದು ಉತ್ತರ ಕೊಟ್ಟರು. ಭೀಮರಾಯನ ಹೃದಯದ ಉದ್ವೇಗವು ತುಟಿಯ ನಡುಕದಲ್ಲಿಯೂ, ಕಣ್ಣೀರಿನ ಮಿಡಿತದಲ್ಲಿಯೂ, ಧ್ವನಿಯ ಗದ್ಗದದಲ್ಲಿಯೂ

ಪ್ರಕಾಶಹೊಂದಿತು. ಇಂತಹ ಅವಸ್ಥೆಯಲ್ಲಿರುವ ಭೀಮರಾಯನನ್ನು ಇದುವರೆಗೆ ಯಾರೂ ಕಂಡುದಿಲ್ಲ.

ಡಾಕ್ಟರರು ಮಾತಿಗೆ ಪ್ರಾರಂಭಿಸಿದರು: "ಭೀಮರಾಯರೆ, ಬಹಳ ವ್ಯಸನದ ಸಂಗತಿ; ಆದರೂ ಹೇಳುವುದನ್ನು ಹೇಳಬೇಕಷ್ಟೆ? ಹುಡುಗನಿಗೆ ವಿಷಪ್ರಯೋಗವಾಡಿದಂತಿದೆ. ಹುಡುಗನ ಮುಖನೋಡಿದರೆ ಗೊತ್ತಾದೀತು. ಮುಂದಿನ ಕೆಲಸವನ್ನು ಬೇಗನೆ ತೀರಿಸಿಬಿಡಿರಿ. ಇಲ್ಲವಾದರೆ ತೊಂದರೆಗೆ ಬಿದ್ದೀತು," ಎಂದು ಸೂಕ್ಷ್ಮದ ನುಡಿಯನ್ನಾಡಿ ರಸ್ತೆಯನ್ನು ಹಿಡಿದರು.

* * * *

ಮನೋಹರನಿಗೆ ಕಠಿಣ ಜ್ವರ. ಭೀಮರಾಯನ ಮನೆಯು ಶ್ಮಶಾನದಷ್ಟು ಶೂನ್ಯ; ಭಯಂಕರ. ಈಗ ಎಂದಿನಂತೆ ಸಂಜೆಯ ವೇಳೆಯಲ್ಲಿ ಮನೆಗೆ ಬರುವ 'ದೊಡ್ಡಣ್ಣ'ನಿಲ್ಲ. ಮನೋಹರನ, ಆ ಸಮಯದಲ್ಲಿ ಆಗಬೇಕಾದ, ನಿತ್ಯದ ಸಂತೋಷದ ಬೊಬ್ಬೆಯಿಲ್ಲ. ಮನೋರಮೆಯ ಅಬ್ಬರದ ಮಾತಿಲ್ಲ. ಮನೆಯೊಳಗೆ ಎಲ್ಲೆಲ್ಲಿಯೂ ಶಾಂತಿ. ಶಾಂತಿಯೆಂದರೆ ಭೂಲೋಕದ ಜೀವನದಲ್ಲಿ ಯಾರಿಗಾದರೂ ಆಶೆಯಿದ್ದರೆ, ಆ ಆಶೆಯನ್ನು ಹೀರುವ ಶಾಂತಿ. ಎಡೆಯಲ್ಲಿ ಒಮ್ಮೊಮ್ಮೆ ಭೀಮರಾಯನ ನಿಟ್ಟುಸಿರು. ಮನೋರಮೆಯ ಕಾರಣವಿಲ್ಲದ ಸಿಟ್ಟು. ಇನ್ನು ಸಿಟ್ಟು ಮತ್ತಾರ ಮೇಲೆ? ಇದುವರೆಗೆ ಮನೋಹರನ ದೊಡ್ಡಣ್ಣನಿದ್ದನು. ಈಗ ಅವನೂ ಇಲ್ಲ. ಈಗಿನ ಸಿಟ್ಟೆಂದರೆ ಗಂಡನ ಮೇಲೆ. ಆ ಮದ್ದು ಸರಿಯಾಗಲಿಲ್ಲ; ಡಾಕ್ಟರರನ್ನು ಕರೆತರಬೇಕಿತ್ತು. ಮನುವಿಗೆ ಬಾಯಾರಿಕೆಯಾದರೆ ಯಾವುದನ್ನು ಕೊಡಬೇಕೆಂದು ಡಾಕ್ಟರರನ್ನು ಕೇಳಲಿಲ್ಲ; ಎಂದು ಮೊದಲಾಗಿ, ಒಂದಲ್ಲದಿದ್ದರೆ ಇನ್ನೊಂದು ನೆವದಿಂದ ಗಂಡನನ್ನು ಜರೆದಾಡುವಳು. ಮಧ್ಯಮಧ್ಯದಲ್ಲಿ ಪಶ್ಚಾತ್ತಾಪ! ಕೆಲವೊಮ್ಮೆ 'ದೊಡ್ಡಣ್ಣ'ನ ಭೀಕರಾಕಾರವು ಕಣ್ಣ ಮುಂದೆ ನಿಂತಂತಾಗುವುದು. ಅವನ ಆಕ್ರಂದನವು ಕಿವಿಗೆ ಕೇಳಿದಂತಾಗುವುದು. "ಇನ್ನೆಂದೂ ಹಾಗೆಮಾಡುವುದಿಲ್ಲ, ತಾಯಿ," ಎಂದು ಹೇಳಿದ ಮಾತು, ಬಾಣದ ಮೊನೆಯಂತೆ, ಎದೆಗೆ ನಾಟಿತ್ತು. ಒಂದು ನಿಮಿಷ ತನ್ನ ಕ್ರೂರ ಮನಸ್ಸನ್ನು ಬಿಗಿಹಿಡಿದು ನಿಲ್ಲಿಸುತ್ತಿದ್ದರೆ, ಇಂದು ಶ್ಯಾಮನು ಕಣ್ಣಮುಂದೆ

ನಲಿದಾಡುತ್ತಿದ್ದ! ಮನುವಾದರೂ, "ದೊಡ್ಡಣ್ಣಾ! ದೊಡ್ಡಣ್ಣಾ!" ಎಂದು ಅವನ ಹಿಂದೆಯೇ ಓಡಾಡುತ್ತಿದ್ದ! ಈಗ ಅದೊಂದೂ ಇಲ್ಲ. ಇಂತಹ ಅವಸ್ಥೆ ಬರಲು ಕಾರಣವಾರು? ತಾನೆ! ಎಂದು ಮೊದಲಾಗಿ ಅವಳ ಮನಸ್ಸಿನ ಆಳದಲ್ಲಿದ್ದ ಚಿಂತನೆ.

ನಾಲ್ಕಾರು ದಿನಗಳು ಕಳೆದುವು. ಮನುವಿಗೆ ಸ್ಮೃತಿ ಬಂದಿರಲಿಲ್ಲ. ಒಮ್ಮೊಮ್ಮೆ ಹುಚ್ಚು ಮಾತಾಡುತ್ತಿದ್ದ. "ದೊಡ್ಡಣ್ಣ! ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ಸ್ವಲ್ಪ ತಡೆ! ನಾನೂ ಬರುತ್ತೇನೆ," ಎಂದು ಅಡುತ್ತಿದ್ದ. ಆಗ ಮನೋರಮೆಗೆ ರೋಮಾಂಚವಾಗುತ್ತಿತ್ತು. 'ದೊಡ್ಡಣ್ಣ'ನು ಹೋದದ್ದೆಲ್ಲಿಗೆಂಬು ಯಾರಿಗೆ ಗೊತ್ತು? ಅವನೊಂದಿಗೆ ಹೋಗುತ್ತೇನೆಂದು ಹೇಳುವ ಹುಡುಗನ ಮಾತನ್ನು ಕೇಳಿದೊಡನೆ ಅವಳ ಹೃದಯವೇ ದ್ರವಿಸುತ್ತಿತ್ತು. ಆದರೆ ಮಾಡುವುದೇನು? ಆಕಾಶದಲ್ಲಿ ತೇಲಾಡುತ್ತಿದ್ದ ಗಾಳಿಪಟದ ದಾರವನ್ನವಳು ತನ್ನ ಕೈಯಿಂದಲೇ ಕಡಿದಿದ್ದಳು. ಹೀಗೆ ಮಾಡಿದರೆ ಪಟವು ಕೈಮೀರಿ, ಗಾಳಿಯಲ್ಲಿ ತೇಲಿಹೋದೀತೆಂದು ಅವಳಿಗೆ ಗೊತ್ತಿರಲಿಲ್ಲ. ಈಗ ಆ ಭಯವೂ ಉಂಟಾಯಿತು.

ಮನೋಹರನಿಗೆ ಸ್ವಲ್ಪ ಪ್ರಜ್ಞೆ ಬಂತು. ಕಣ್ದೆರೆದು ಸುತ್ತಲೂ ನೋಡಿದನು. "ಅಪ್ಪಾ, ದೊಡ್ಡಣ್ಣನು ಇನ್ನೂ ಶಾಲೆಯಿಂದ ಬರಲಿಲ್ಲ?" ಎಂದು ಕೇಳಿದನು. ಬಳಿಯಲ್ಲೆ ಧ್ಯಾನಮಾಡುವವನಂತೆ ಕುಳಿತಿದ್ದ ಭೀಮನು, "ಇಲ್ಲ, ಮನು," ಎಂದೇ ಉತ್ತರಕೊಟ್ಟು, ನಿಜ ಸಂಗತಿಯನ್ನು ಮರೆಮಾಜಲು ಯತ್ನಿಸಿದನು. ಮನೋಹರನು, "ಅಪ್ಪ, ನನ್ನ ಬಳಿಯಲ್ಲಿಯೆ ಕುಳಿತುಕೊ: ತಾಯಿಯೂ ಕುಳಿತುಕೊಳ್ಳಲಿ," ಎಂದು ಹೇಳಿದನು. ಮಗನ ಒಂದು ಮಾತು ಕೇಳಿದುದರಿಂದ ಪ್ರಾಣಬಂದಂತಾದ ಮನೋರಮೆ, "ಏನು ಬೇಕು, ಮಗು, ನಿನಗೆ?" ಎಂದು ಓಡುತ್ತಾ ಬಂದು, ಒಂದು ಗಿಂಡಿಯಿಂದ ಸ್ವಲ್ಪ ಕಾಯಿಸಿದ ಹಾಲನ್ನು ಹುಡುಗನ ಬಾಯಿಗೆರೆದಳು. ಮನೋಹರನು ಒಲ್ಲೆನೆಂದನು. "ಸ್ವಲ್ಪ ಕುಡಿ, ಮನು! ನಿನಗೆ ಬಹಳ ಆಯಾಸವಾಗಿದೆ," ಎಂದು ತಾಯಿ ಒತ್ತಾಯಮಾಡಿದಳು. "ದೊಡ್ಡಣ್ಣನನ್ನು ಬಿಟ್ಟು ಕುಡಿಯುವುದಿಲ್ಲ," ಎಂದವನು ಖಂಡಿತವಾಗಿ ಹೇಳಿದಾಗ, ಮನೋರಮೆಯ ಕಣ್ಣಿನಿಂದ ಸರ್ರೆಂದು ಕಣ್ಣೀರು ಧಾರಾಕಾರದಿಂದ ಹರಿಯಿತು.

''ಅಪ್ಪಾ! ದೊಡ್ಡಣ್ಣನು ನಿಮಗೆ ಕಾಣುತ್ತಾನೊ?'' ಎಂದು, ಮನೋಹರನು ತಂದೆಗೆ ಪ್ರಶ್ನೆಮಾಡಿದನು. ''ಶಾಲೆಯಿಂದ ಬರ ಬೇಕಷ್ಟೆ, ಮನು, ನಿನ್ನ ದೊಡ್ಡಣ್ಣ!" ಎಂದು ಭೀಮನು ಮರುಮಾತು ಕೊಟ್ಟನು. ''ಇದು ಸುಳ್ಳು, ಅಪ್ಪ! ನೋಡು, ನನ್ನ ಕಣ್ಣಮುಂದೆ ನಿಂತಿದ್ದಾನೆ. ದೊಡ್ಡಣ್ಣ ಮಾತಾಡುವುದಿಲ್ಲ. ತಾಯಿ ಬೈದಾಳೆಂದು ಹೆದರುತ್ತಾನೆ," ಎಂದು ಮನೋಹರನು ಹುಚ್ಚುಮಾತಿಗೆ ಪ್ರಾರಂಭಿಸಿದನು. ಭೀಮರಾಯನು ಕಣ್ಣೀರನ್ನೊರಸಿದನು. ಮನೋರಮೆಯ ನಿಟ್ಟುಸಿರು ರೋದನವಾಗಿ ಮಾರ್ಪಟ್ಟಿತು.

''ತಾಯಿ! ನನ್ನ ದೊಡ್ಡಣ್ಣನನ್ನು ಇನ್ನು ಮುಂದೆ ಹೊಡೆಯುತ್ತೀಯೋ?" ಎಂದು ಮತ್ತಿನ ಪ್ರಶ್ನೆ.

"ಇಲ್ಲ, ಮನು, ಇಲ್ಲ. ನಿನ್ನ ದೊಡ್ಡಣ್ಣನಲ್ಲವೆ ಅವನು," ಎಂದು ಮನೋರಮೆ ಹೇಳಿದಳು.

"ಹಾಗಾದರೆ ಕರೆಯುತ್ತೇನೆ. ನೋಡು, ನನ್ನ ಮುಂದೆ ಸ್ವಲ್ಪ ದೂರದಲ್ಲಿ ನಿಂತಿದ್ದಾನೆ. ನಗುತ್ತಾನೆ. ನನ್ನನ್ನು, 'ಮನೂ! ಮನೂ!' ಎಂದು ಕರೆಯುತ್ತಾನೆ," ಎಂದು ಕೈಗಳನ್ನಾಚೆಗೆ ಚಾಚಿದನು.

ಭೀಮರಾಯನ ಎದೆಯೆಂಬ ಗಡಿಯಾರವು ನಿಂತಂತಾಯಿತು. ಮನೋರಮೆಯ ಮೈಯೆಲ್ಲಾ ಬೆವರಿನಿಂದ ಒದ್ದೆಯಾಗಿತ್ತು.

"ಅಪ್ಪ! ನೀವೆಲ್ಲಾ ಸ್ವಲ್ಪ ತಡೆಯಿರಿ. ಅಣ್ಣನನ್ನು ಕರೆತರುತ್ತೇನೆ," ಎಂದು ಮತ್ತೂ ಮನೋಹರನ ಮಾತು. ಮನೋರಮೆ, ''ಬೇಡ, ಮನು! ನಮ್ಮನ್ನು ಬಿಟ್ಟು ಹೋಗಬೇಡ," ಎಂದು ಚೀರಿದಳು.

''ಅಣ್ಣ ನಗುತ್ತಿದ್ದರೂ, ಅವನ ನಗೆಯೊಳಗೆ ಸಿಟ್ಟಿದೆ. ನಾನು ಹೋಗದೆ ಅವನ ಸಿಟ್ಟು ಶಾಂತವಾಗದು," ಎಂದು ಮನೋಹರನು ಆಯಾಸದ ಲಕ್ಷಣಗಳನ್ನು ತೋರಿಸಿದನು.

''ಅಯ್ಯೋ, ನಿನಗೆ ಏನಾಗುತ್ತದೆ, ಮನೂ!" ಎಂದು ಭೀಮರಾಯನು ಬೊಬ್ಬಿಟ್ಟನು. ಮನೋರಮೆಯು, ''ಅಯ್ಯೋ, ನನ್ನ ಕಂದಾ!" ಎಂದು, ಹೊಟ್ಟೆಯನ್ನು ಹೊಡೆದುಕೊಂಡಳು.

ಮನೋಹರನ ಮುಖವು ಸ್ವಲ್ಪ ವಿಕೃತವಾಯಿತು. ಬಾಯಿಯಲ್ಲಿ ಏನೋ ಹೇಳುತ್ತಿದ್ದ. ಹೇಳಿದುದೇನೆಂದು ಸ್ಪಷ್ಟವಾಗಲಿಲ್ಲ. ಭೀಮ

ರಾಯನು ಅವನನ್ನು ಹಾಸಿಗೆಯಿಂದೆತ್ತಿ ತನ್ನೆದೆಯ ಮೇಲೆ ಮಲಗಿಸಿ ಕೊಂಡುದೇ ತಡ; ಮನೋಹರನ ನಾಡಿಗಳಲ್ಲಿ ಸ್ಪಂದನವೇ ಇಲ್ಲದಂ ತಾಯಿತು. 'ದೊ–ಡ್ಡ–ಣ್ಣ!' ಎಂಬ ಅವ್ಯಕ್ತವಾಣಿಯನ್ನಾಡುತ್ತಾ ಮುಖವು ಒಂದೆಡೆಗೆ ಜೋತುಹೋಯಿತು. ಶ್ವಾಸವು ನಿಂತಿತು. ಕಣ್ಣು ಗಳು ತೆರೆದಂತೆ ಇದ್ದುವು. ಅವುಗಳಲ್ಲಿ ಜೀವಕಳೆ ಮಾತ್ರ ಇರಲಿಲ್ಲ.

ಭೀಮರಾಯನು, "ಅಯ್ಯೋ, ಮನು! ನೀನು ನನ್ನನ್ನು ಕೈಬಿಟ್ಟೆಯಾ?" ಎಂದು ಅವನ ಮೃತದೇಹವನ್ನು ಬಿಗಿದಪ್ಪಿ, ವಶಗೆಟ್ಟು ನೆಲದ ಮೇಲೆ ಹೊರಳಾಡಿದನು. ಮನೋರಮೆ ಸ್ಮೃತಿತಪ್ಪಿ ನೆಲದ ಮೇಲೆ ಬಿದ್ದಿದ್ದಳು. ದೊಡ್ಡಣ್ಣನನ್ನು ಕರೆತರುತ್ತೇನೆಂದು ಹೋದ ಮನೋ ಹರನು ಮತ್ತೆ ಬರಲೇ ಇಲ್ಲ.



# ಅದೃಷ್ಟ

ಸಂಜೆಯಾಗುತ್ತಾ ಬಂದಿತ್ತು. ನೆಳಲು, ಅಂಗಳದ ತುಳಸಿ ಕಟ್ಟೆಯ ಗಡಿಯನ್ನೂ ದಾಟಿ ಮುಂದೆ ಒತ್ತಿದ್ದಿತು. ಇದೀಗ ಹಳ್ಳಿಯ ಹೆಂಗುಸರಿಗೆ ಹೊತ್ತು ಮೀರಿತೆಂದು ತೋರಿಸುವ ಗುರುತು. ಕತ್ತಲಾಗುವುದಕ್ಕೆ ಮೂರೋ ನಾಲ್ಕೋ ಗಳಿಗೆಗಳು ಮಾತ್ರ ಇರಬಹುದು.

ಮಹಾದೇವ ಶಾಸ್ತ್ರಿಗಳ ಮನೆಯೊಳಗೆ ಇದುವರೆಗೆ ತುಂಬ ಜನರು. ಜನರು ಮತ್ತಾರೂ ಅಲ್ಲ; ಆ ದಿನ ನಡೆದಿದ್ದ ಅವರ ತಂದೆಯ ಶ್ರಾದ್ಧಕ್ಕೆ ಬಂದಿದ್ದ ಪುರೋಹಿತ ಬಂಧುವರ್ಗದವರು. ಮಧ್ಯಾಹ್ನ ಎರಡು ಗಂಟೆಗೆ ತಾನೇ ಎಲ್ಲರ ಭೋಜನವು ಮುಗಿದುದು. ಏನೋ ಒಂದು ದೊಡ್ಡ ಶಕ್ತಿ ಸಾಹಸದ ಮಹಾಕೃತ್ಯವನ್ನು ಮಾಡಿ ಬಳಲಿಬೆಂಡಾದವರು ನೆಲದ ಮೇಲೆ ದೊಪ್ಪನೆ ಬಿದ್ದು ವಿಶ್ರಾಂತಿ ಪಡೆವಂತೆ, ಊಟಮಾಡಿದ ಜನರೆಲ್ಲ ಹೊಟ್ಟೆ ಬೀಗಿಹೋದುದರಿಂದ, ಜಂಬುಖಾನಗಳ ಮೇಲೋ ಚಾಪೆಗಳ ಮೇಲೋ ನೆಲದ ಮೇಲೋ ಮಲಗಿದ್ದರು; ನಿದ್ದೆಹೋಗಿದ್ದರು. ಬಂಧುಗಳ ಮನೆಗೆ ಬಿಡುವಿದ್ದು ಹೋಗುವವರ ಪಾಡು ಒಂದು ರೀತಿ; ದಿನನಿತ್ಯ ಅನೇಕ ಶಿಷ್ಯವರ್ಗದವರಲ್ಲಿ ಆಗುವ ಶುಭಾಶುಭ ಕೃತ್ಯಗಳನ್ನು ಆಗ ಮಾಡಿಸುವ ಹೊಣೆಗಾರಿಕೆಯನ್ನು ಹೊತ್ತ ಪುರೋಹಿತರ ಪಾಡು ಬೇರೆ. ಅವರಿಗೆ ಒಂದೇ ಸ್ಥಳದಲ್ಲಿ ಹೆಚ್ಚು ಸಮಯ ನಿಲ್ಲಲು ಸಾಧ್ಯವಿಲ್ಲ. ಒಬ್ಬ ಶಿಷ್ಯನ ಮನೆಯಲ್ಲಿ ಒಂದು ಕೆಲಸವನ್ನು ಮಧ್ಯಾಹ್ನಕ್ಕೆ ತೀರಿಸಿದರೆ ರಾತ್ರಿಗೆ ಇನ್ನೊಬ್ಬನಲ್ಲಿಗೆ ಸಾಗಿ ಇನ್ನೊಂದು ಕೆಲಸಕ್ಕೆ ಕೈಕೊಡಬೇಕು. ಇಂತಿಂತಹ ಬಂದರದಲ್ಲಿ ಇಂತಿಷ್ಟೆ ಸಮಯ ನಿಲ್ಲುವುದೆಂಬ ನಿಯಮಕ್ಕೆ ಒಳಪಟ್ಟು ಲಂಗರು ಹೊಡೆವ ತೆಗೆವ ಹಡಗಿನ ಸಂಚಾರದಂತೆ ಅವರ ಸಂಚಾರ. ಚುಕ್ಕಾಣಿ ತಿರುಗಿಸುವ ಕೆಲಸ ಹೆಚ್ಚು. ಮಹಾದೇವ ಶಾಸ್ತ್ರಿಗಳ ಪುರೋಹಿತ ಮುಖ್ಯಪ್ರಾಣಾಚಾರ್ಯರು ಆಗ ತಾನೆ ಆಕಳಿಕೆಯನ್ನೂ ಮಾತನ್ನೂ ಒಟ್ಟೊಟ್ಟಿಗೆ ಬೆರಸಿ ಯಜಮಾನರನ್ನು ಬೀಳ್ಕೊಂಡು, ತಮ್ಮ ಅಕ್ಕಿಕಾಯಿ ಸರಕಿನ ಗಂಟನ್ನು ಭುಜಕ್ಕೆ ಬಿಗಿದು, ಕೈಯಲ್ಲೊಂದು ಕೋಲನ್ನು ಹಿಡಿದುಕೊಂಡು ಹೊರಟೇಬಿಟ್ಟರು.

ಆಚಾರ್ಯರಿಗೂ ಶಾಸ್ತ್ರಿಗಳಿಗೂ ಏನೋ ಒಂದು ಸಂಬಂಧ. ಮೊದಲಾಗಿ ಗುರುಶಿಷ್ಯ ಸಂಬಂಧವೇ ಸಾಕು ವ್ಯಕ್ತಿಗಳ ಸ್ನೇಹದ ಎರಕಕ್ಕೆ! ಆಚಾರ್ಯರ ಕುಲದವರೇ ಅನಾದಿಯಿಂದಲೂ ಶಾಸ್ತ್ರಿಗಳ ಮನೆತನದ ಪುರೋಹಿತರು. ಇದರೊಂದಿಗೆ ಒಂದೆರಡು ತಲೆಹಿಂದೆ ಆಗಿದ್ದ ರಕ್ತಸಂಬಂಧವೊಂದು. ಹೀಗಾಗಿ ಮುಖ್ಯಪ್ರಾಣಾಚಾರ್ಯರು ಶಾಸ್ತ್ರಿಗಳ ತಂದೆಯ ಶ್ರಾದ್ಧಕ್ಕೆ ಬಂದಾಗ ತಮ್ಮ ಕುಟುಂಬಿನಿ ಪಾರ್ವತಿ ಅಮ್ಮನವರನ್ನೂ ಜೆನ್ನಹಿಂದೆಯೆ ಕರೆದುಕೊಂಡು ಬಂದಿದ್ದರು. ಬಂಧುಗೃಹಕ್ಕೆ ಬಂದ ದಿನವೆ ಹೆಂಡತಿ ಎಂಬ ಪ್ರಾಣಿಯನ್ನು ಹೊಡೆದುಕೊಂಡು ಮರಳಿ ಹೋಗುವುದು ನ್ಯಾಯವೇ? ನ್ಯಾಯವನ್ನು ತಿಳಿದ ಯಾರೂ ಈ ಮಾತಿಗೆ ಒಪ್ಪಲಾರರು. ಪುರೋಹಿತರು ಪಾರ್ವತಿ ಅಮ್ಮನನ್ನು ಅಲ್ಲಿಯೇ ಬಿಟ್ಟು ಇನ್ನು ಹತ್ತೆಂಟು ದಿವಸಗಳಲ್ಲಿ ಆಗಲಿರುವ ಯಾವುದೋ ಒಂದು ಪೂಜೆಗೆ ಬಂದವರು ಕರೆದುಕೊಂಡು ಹೋಗುವುದಾಗಿ ಮಾತುಕೊಟ್ಟು ತಮ್ಮ ದಾರಿಯನ್ನು ಹಿಡಿದರು.

ಪಾರ್ವತಿಯಮ್ಮನೋ! ಆಕೆ ಪಾಪ! ಪುರಾಣವಸ್ತು. ತನ್ನ ಹೆಸರಿನಷ್ಟೆ ಪರಿಶುದ್ಧೆ! ಗಂಡನ ಛಾಯೆ. ಹೊಸ ದಿನದ ಹೊಸ ಸೋಗನ್ನು ಅರಿತವಳಲ್ಲ. ಮೋರೆಯ ಉದ್ದಗಲಕ್ಕೂ ತುಂಬ ಕುಂಕುಮದ ಬೊಟ್ಟು. ಕಿವಿತುಂಬ ಆಭರಣ. ಕೈತುಂಬ ಗಾಜಿನ ಬಳೆಗಳು. ಇವುಗಳ ಮಧ್ಯಕ್ಕೆ ಒಂದೆರಡು, ಊರ ಸೊನೆಗಾರನೆ ತಯಾರಿಸಿದ, ಒಳಗೆ ಟೊಳ್ಳಾಗಿದ್ದರೂ ಅರಗಿನಿಂದ ಹೊಟ್ಟೆತುಂಬಿದ ಎರಡೆರಡು ಗಟ್ಟಿನ ಬಳೆಗಳು—ಇಷ್ಟೆ ಆಕೆಯ ಆಭರಣಗಳು. ಮುಖ್ಯಪ್ರಾಣಾಚಾರ್ಯರ ಶಿಷ್ಯವರ್ಗವು ಸ್ವಲ್ಪ ದೊಡ್ಡದೆನ್ನಬೇಕು. ಆದುದರಿಂದ ವರ್ಷಕ್ಕೆ ಹತ್ತೆಂಟಾದರೂ ಸೀರೆಗಳು ದಾನವಾಗಿ ದೊರೆಯುತ್ತಿದ್ದುವು. ಪಾರ್ವತಿ ಅಮ್ಮನ ವಸ್ತ್ರಸಂಪತ್ತಿಗೆ ಕಡಿಮೆಯಾದರೂ ಏನು? ದಾನಕೊಡುವ ಸೀರೆಗಳು ಹೆಚ್ಚಾಗಿ ಕೆಲಗಾಲವಾದರೂ "ಸರ್ವಿಸು" ಮಾಡಿದವುಗಳಾಗಿರುತ್ತವೆ. ದಾತೃವಿನ ಕೈಬಿಟ್ಟೊಡನೆ ನಡುನಡುವೆ ಬಿಚ್ಚಿ ಉದ್ದದಲ್ಲಿಯೂ ಅಗಲದಲ್ಲಿಯೂ ಹೆಚ್ಚುತ್ತವೆ. ಆದರೇನಪ್ಪ! ವರ್ಷಕ್ಕೆ ಹತ್ತು ಸೀರೆಗಳೆಂದರೆ ಸುಮಾರು ತಿಂಗಳಿಗೆ ಒಂದು ಸೀರೆಯಂತಾಯಿತು. ಆಚಾರ್ಯರ ಕೈಹಿಡಿದ ಸರಲಸ್ವಭಾವದ ಪಾರ್ವತಿ ಅಮ್ಮನಿಗೆ ಯಾವುದರಲ್ಲಿಯೂ ಕೊರತೆಯಿರಲಿಲ್ಲ.

ಪಾರ್ವತಿ ಅಮ್ಮನ (ಅಲ್ಲ, ಅವಳ ರೂಢಿಯ ಹೆಸರು ಪಾರ್ತಮ್ಮ ನೆಂದು. ಶಾಸ್ತ್ರಕ್ಕಿಂತ ರೂಢಿಯೇ ಮಾನ್ಯವಾಗಿರುವುದರಿಂದ ಆಕೆಯನ್ನು ಇನ್ನು ಮುಂದೆ ಆ ಹೆಸರಿನಿಂದಲೆ ಕರೆಯುತ್ತೇನೆ.) ಸ್ವಭಾವ ದೊಡ್ಡದು. ಆಕೆಯ ಮೋರೆಯಲ್ಲಿರುವ ತಿಲಕದಷ್ಟೆ ಉದ್ದ; ಅಷ್ಟೇ ಅಗಲ. ಕೆಲಸ ಮಾಡದೆ ಇರುವುದೆಂದರೆ ಆಕೆಗೆ ಬೇಜಾರ. ಏನೂ ಕೆಲಸವಿಲ್ಲದಿದ್ದರೆ ನಾಲ್ಕು "ಶೋಭಾನೆ"ಗಳನ್ನಾದರೂ ಹೇಳಬೇಕು. ಮತ್ತೇನೂ ಇಲ್ಲದಿದ್ದರೆ ನಾಲ್ಕಾರು ಕಾಳು ಅಕ್ಕಿಯನ್ನಾದರೂ ಬಾಯಿಗೆ ಹಾಕಿ ಜಗಿಯುತ್ತಿರಬೇಕು. ಅಂತಹ ಹೆಂಗುಸು ಶ್ರಾದ್ಧದ ದಿನ ಹೇಗೆ ಸುಮ್ಮನೆ ಕುಳಿತಾಳು? ಮನೆ ಹೆಂಗಸರಿಗೆ ತುಂಬು ಕೆಲಸವಿದೆ. ಊಟವಾಗುವಾಗಲೇ ಮೂರು ಘಂಟೆ. ಮತ್ತೆ ಮುಸುರೆಯಾದ ಪಾತ್ರೆಗಳನ್ನು ತಿಕ್ಕಬೇಕು. ಅತ್ತಿತ್ತ ಬಿದ್ದಿರುವ ಸಾಮಾನುಗಳನ್ನೂ ಗಡಿಗೆ ಮಡಿಕೆಗಳನ್ನೂ ಚಾಪೆ ವಸ್ತ್ರಗಳನ್ನೂ ಆಯಾ ಸ್ಥಳಗಳಲ್ಲಿ ಇರಿಸಬೇಕು. ಮಾಡತಕ್ಕ ಕೆಲಸಗಳು ಇನ್ನು ಎಷ್ಟೋ ಇವೆ. ಪಾಪ! ಸಾಧುಗುಣದ ಪಾರ್ತಮ್ಮ ಹೊಟ್ಟೆ ತುಂಬ ಮೃಷ್ಟಾನ್ನ ಭೋಜನಮಾಡಿ, ತಾಂಬೂಲವನ್ನು ಜಗಿದಾದ ಮೇಲೆ, ಮನೆ ಹೆಂಗುಸರು ಊಟಮಾಡದೆ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಓಡಾಡುತ್ತಿರುವಾಗ, ಅದನ್ನೆಲ್ಲಾ ನೋಡಿ ಹೇಗೆ ಸಹಿಸಿಯಾಳು? ಅವಳ ಕರ್ತವ್ಯ ಭಾರದಲ್ಲಿ ಒಂದು ಹೇರನ್ನಾದರೂ ಹೇಗೆ ಹೊರದಿದ್ದಾಳು? ಉಂಡದ್ದೇ ತಡ; ಘುರ್ರೆಂದು ತೇಗಿದ್ದೇ ತಡ. ತಾಂಬೂಲವನ್ನು ಹಾಕಿ ನಾಲ್ಕಾರು ಸಲ ಅಂಗಳದಲ್ಲಿ ಉಗುಳಿದ್ದೇ ತಡ; ಪಾರ್ತಮ್ಮ ನೆಟ್ಟಗೆ ಅಡಿಗೆ ಮನೆಗೆ ನುಗ್ಗಿ ದಾಳಿಯಿಟ್ಟು ಅಲ್ಲಿಯೇ ಕಜ್ಜಾಯ ಬೇಯಿಸುತ್ತಿದ್ದ ತುಂಗಮ್ಮನ ಕೈಯಲ್ಲಿದ್ದ ಸೌಟನ್ನು ಕಿತ್ತುಕೊಂಡು "ತುಂಗಮ್ಮ! ನೀನು ಹೋಗು ಊಟಮಾಡಿ ಬಾ!" ಎಂದು ಆ ಕೆಲಸಕ್ಕೆ ಪವಿತ್ರ ಹಾಕಿಕೊಂಡಳು. ತುಂಗಮ್ಮನೆಂದರೆ ಮಹಾದೇವ ಶಾಸ್ತ್ರಿಗಳ ಹಿರಿಯ ಮಗಳು. ಒಲೆಬುಡದಲ್ಲಿ ಬೆಂಕಿಗೆ ಕುಳಿತು ಕುಳಿತು ಮೈಯೆಲ್ಲ ಬೆವರಿನಿಂದ ತೊಯಿದು ಹೋಗಿದ್ದರೂ ತುಂಗಮ್ಮನು "ಏನು? ನೀವಿಲ್ಲಿ ಅಡಿಗೆ ಮಾಡುವುದಕ್ಕೆ ಬಂದುದೇ! ಕೈಸಾಲೆಯಲ್ಲಿ ಮಲಗಿಕೊಳ್ಳಿ" ಎಂದಳು. ಪಾರ್ತಮ್ಮ ಇಂತಹ 'ಕೊಳ್ಳಿ' ಎನ್ನುವ ಆಜ್ಞೆಗೆ ಒಳಪಡುವ ಹೆಂಗುಸಲ್ಲ. "ನನಗೇನು ಸಂಕಟ! ಕಂಠಪ್ರಮಾಣ ಉಂಡಾಯಿತು. ಹೋಗು

ನೋಡೋಣ. ಒಂದು ತುತ್ತು ಬಾಯಿಗೆ ಹಾಕಿ ಮತ್ತೆ ಬೇಕಾದರೆ ಕೆಲಸಮಾಡು" ಎಂದು ಪಾರ್ತಮ್ಮನ ಹುಕುಂ ಹೊರಟೇಬಿಟ್ಟಿತು. ತುಂಗಮ್ಮ ನಿರುಪಾಯಳಾದಳು. ಬೆವರನ್ನು ಜ್ಜಿಕೊಂಡು, ಮೊಗದಲ್ಲಿ ಬೊಟ್ಟು ಅಳಿಸಿಹೋಗಿದ್ದುದರಿಂದ ಒಂದು ಬೊಟ್ಟನ್ನು ಹಾಕಿಕೊಂಡು, ಕೈಕಾಲು ತೊಳೆದು ಊಟಕ್ಕೆ ಹೋದಳು. ಪಾರ್ತಮ್ಮನು ಒಲೆಯ ಬುಡದಲ್ಲಿ ಕುಳಿತು ಕಜ್ಜಾಯಗಳನ್ನು ಬೇಯಿಸಿ, ಬೇಯಿಸಿ ಅಲ್ಲೆ ಇಟ್ಟಿದ್ದ ಮಡಿಕೆಗಳನ್ನು ತುಂಬಿಸುತ್ತಿದ್ದಳು. ಬೆಂಕಿ ಕನಲುತ್ತಿತ್ತು. ಅದರ ಮೇಲಿಂದ ಉರುಳಿಯ ಎಣ್ಣೆ ಕುದಿದು ಗುಳುಗುಳಿಸುತ್ತಿತು. ಚುಯ್ಯೆಂದು ಕಜ್ಜಾಯಗಳ ಹಿಟ್ಟು ಉರುಳಿಯಲ್ಲಿ ಬೀಳುತ್ತಲೆ ಇತ್ತು. ಕೈಸಟ್ಟುಗ ದಿಂದ ಉರುಳಿಯನ್ನು ತೊಳಸುವ ಗಣಗಣ ಶಬ್ದವು ಕಿವಿಗೆ ಇಂಪಾ ಗಿಯೆ ಇತ್ತು. ಇಂತಹ ಹೃದಯಾನಂದಕರ ಸಂದರ್ಭಗಳು ದೊರೆ ತಾಗ ಕವಿಗಳಾದರೆ ಸ್ಫೂರ್ತಿಗೊಂಡು ಕವಿತಾನಿರ್ಝರವನ್ನೆ ಕೆಡೆಯಿಸಿ ಬಿಟ್ಟಾರು. ಆದರೆ ಅಲ್ಲಿದ್ದುದು ಕವಿಯಲ್ಲ, ನಮ್ಮ ಮುಖ್ಯಪ್ರಾಣಾ ಚಾರ್ಯರ ಅರ್ಧಾಂಗಿ ಪಾರ್ತಮ್ಮ; ಪುರೋಹಿತರ ಪತ್ನಿ ಪಾರ್ತಮ್ಮ. ಆಕೆ ದಿವ್ಯವಾದ ಶೋಭನವೊಂದನ್ನು ಹಾಡುತ್ತಾ ಮಧ್ಯೆಮಧ್ಯೆ ಆಕಳಿ ಸುತ್ತಾ ಸೌಟಿನ ಘಣಘಣ ಶಬ್ದದಿಂದ ಆ ಹಾಡಿಗೆ ತಾಳಹಾಕುತ್ತಾ "ದ್ವಾಪರಯುಗದಿ..........." ಎಂದು 'ಶೋಭಾನ'ದ ಸೊಲ್ಲನ್ನು ಪ್ರಾರಂಭಿಸುವಾಗ, ಈ ಕಲಿಯುಗದ ಗೊಡವೆಯೇ ಮರೆತುಹೋಗಿ ನಮ್ಮ ಮನಸ್ಸು ಆ ದ್ವಾಪರ ಯುಗಕ್ಕೂ ಅಂದಿನ ಶ್ರೀಕೃಷ್ಣನ ನಿವಾಸ ಭೂಮಿಯಾಗಿದ್ದ ಮಥುರೆಗೋ ದ್ವಾರಕೆಗೋ ಹೋದಲ್ಲಿ ಆಶ್ಚರ್ಯ ವೇನಿದೆ? ಹೀಗೆ ಉದ್ದಕ್ಕೂ ಹಾಡುಹೋಗುತ್ತಿದ್ದಾಗ, ಕೈಯ ಸೌಟು ತೊಳೆಸಿ ತೊಳೆಸಿ ಕಜ್ಜಾಯಗಳನ್ನು ಬೇಯಿಸುತ್ತಲೆ ಇರುವಾಗ—ಅಲ್ಲಿ ಕಜ್ಜಾಯದ ಅಸಿದ್ಧಪದಾರ್ಥಗಳೆಲ್ಲ ಸಿದ್ಧವಾಗಿ, ಒಳ್ಳೆಯ ರುಚಿಕರವಾದ ಅಪ್ಪಗಳೋ ಒಡೆಗಳೋ ಉಂಡೆಗಳೋ ಆಗಿ ಪರಿವರ್ತನಗೊಳ್ಳುವುದ ರಲ್ಲಿಯೂ ಆಶ್ಚರ್ಯವುಂಟೇ?

ಪಾರ್ತಮ್ಮನು ಆಯಾ ಜಾತಿಗೆ ಸೇರಿದ ಕಜ್ಜಾಯಗಳನ್ನು ಮಾಡಿ ಮುಗಿಸಿಯೇ ಬಿಟ್ಟಳು. ಅಪ್ಪಗಳಾದುವು; ಒಡೆಗಳಾದುವು; ಉಂಡೆ ಗಳಾದುವು; ಆ ದಿನದ ಅವಶೇಷವೆಲ್ಲ ರಾಶಿರಾಶಿಯಾಗಿ ಕುಡಿಕೆಗಳಲ್ಲಿ

ತುಂಬಿದುವು. ಈಗ ತಾನೆ ಪಾರ್ತಮ್ಮ ಅದ್ದಿಟ್ಟನ್ನು ತಯಾರಿಸುವ ಕೆಲಸಕ್ಕೆ ಕೈಹಚ್ಚಿದ್ದಾಳೆ. ಅದ್ದಿಟ್ಟನ್ನು ಹೂಡುವುದೆಂದರೆ—ಭಕ್ಷ್ಯಗಳನ್ನು ಬೇಯಿಸುವ ಕೆಲಸಕ್ಕೆ ಮಂಗಳಪದ ಹೇಳುವುದೆಂದರ್ಥ. ಈ ಅದ್ದಿಟ್ಟೆಂದರೆ ಏನೆಂದು ಹಲವರಿಗೆ ತಿಳಿಯದಿರಬಹುದಲ್ಲವೇ? ಅದರ ಪರಿಚಯವನ್ನು ಮಾಡಿಕೊಟ್ಟಿದ್ದೇನೆ.

'ಅದ್ದಿಟ್ಟು' ಎಂಬ ಪದದ ವ್ಯುತ್ಪತ್ತಿ ಹೇಗೆ ಎಂದು ನನ್ನಲ್ಲಿ ಕೇಳಬೇಡಿ. ಅದನ್ನು ಮಾಡುವವರಾಗಲಿ, ತಿನ್ನುವವರಾಗಲಿ, ಅದಕ್ಕೆ ಆ ಹೆಸರನ್ನು ಕೊಟ್ಟವರಾಗಲಿ, ವ್ಯಾಕರಣವನ್ನೋದಿರಲಿಕ್ಕೆ ಕಾರಣವಿಲ್ಲ. ಆದರೂ ಬೇರೆ ಬೇರೆ ಶಬ್ದಗಳ ಪ್ರಯೋಗವನ್ನು ನೋಡಿ, ಅದರ ವ್ಯುತ್ಪತ್ತಿ ಹೇಗಾಯಿತೆಂಬುದನ್ನು ಮಾತ್ರ ಸೂಚಿಸುತ್ತೇನೆ. ಹಾಗೆಂದು ನನ್ನ ಮತವೆ ಸರಿಯೆನ್ನಲು ಧೈರ್ಯಸಾಲದು.

'ಉಪ್ಪಿಟ್ಟು' ಎಂದರೆ ಏನೆಂದು ನಿಮಗೆ ಗೊತ್ತಿದೆಯಲ್ಲ? ಉಪ್ಪು + ಹಿಟ್ಟು ಎಂದು ಅದರ ಸಂಧಿಯನ್ನು ಬಿಡಿಸಬೇಕು. ಉಪ್ಪಿನಿಂದ ಕೂಡಿದ ಹಿಟ್ಟು, ಎಂದದರ ಅರ್ಥವಾಗಬಹುದೇ? ಹಾಗೆಂದರೇನು? ಯಾವ ತಿಂಡಿ ತಿನಿಸಿಗೆ ಉಪ್ಪು ಹಾಕುವುದಿಲ್ಲ? ಎಲ್ಲದಕ್ಕೂ ಉಪ್ಪು ಹಾಕುವಾಗ ರವೆಯ ಉಪ್ಪಿಟ್ಟಿಗೆ ಮಾತ್ರ ಉಪ್ಪಿನಿಂದ ಕೂಡಿದ ಹಿಟ್ಟು ಎಂಬ ಹೆಸರೇಕೆ ಬಂತು? ಗೋಧಿರವೆಯನ್ನು ಹಿಟ್ಟು ಎಂದು ಹೇಳಬಹುದೇ? ಹೀಗೆಲ್ಲ ಪ್ರಶ್ನೆಗಳ ಗುಂಡುಗಳನ್ನೆಸೆದರೆ ನಾನು ಕೆಟ್ಟೆ. ಹೇಗೂ ಇದೊಂದು ನಿಜ. ಉಪ್ಪು ಮತ್ತು ಹಿಟ್ಟು ಎಂಬ ಎರಡು ಪದಗಳು ಸೇರಿ ಉಪ್ಪಿಟ್ಟಾಗುತ್ತದೆ. ಅದರಂತೆ ಅದ್ದು ಎಂಬ ಕ್ರಿಯಾಪದವೂ ಹಿಟ್ಟು ಎಂಬ ನಾಮಪದವೂ ಸೇರಿ ಅದ್ದಿಟ್ಟು ಎಂದಾಗುತ್ತದೆ. ಇದರ ಅರ್ಥವೇನೆಂದು ಇಷ್ಟರಿಂದಲೆ ಊಹಿಸಿಕೊಳ್ಳಿರಿ. ಈ ತಿಂಡಿ ಏನೆಂಬುದನ್ನು ತಿಂದೇ ಪರೀಕ್ಷಿಸಬೇಕಷ್ಟೆ. ಅದು ಸದ್ಯಃ ಅಸಾಧ್ಯ.

ಶ್ರಾದ್ಧಾದಿ ಪುಣ್ಯದಿನಗಳಲ್ಲಿ ಅನೇಕಾನೇಕ ಖಾದ್ಯ ವಸ್ತುಗಳು ತಯಾರಾಗುತ್ತವಲ್ಲ? ಅವುಗಳಲ್ಲಿ ಸುಕ್ಕಿನುಂಡೆ ಎಂಬುದು ಭಕ್ಷ್ಯರಾಜನೆನಿಸಿಕೊಂಡಿದೆ ನಮ್ಮೂರಲ್ಲಿ. ಆದರೊಳಗಿನ ಹೂರಣದಲ್ಲಿ ಬೇಯಿಸಿದ ಕಡಲೆ ಹಿಟ್ಟು, ಬೆಲ್ಲ, ಎಳ್ಳು, ತೆಂಗಿನ ತಿರುಳು; ಮೊದಲಾದ ಸರಸ ವಸ್ತುಗಳಿರುತ್ತವೆ. ಹೊರಗಿನ ಆವರಣವು ಅಥವಾ ಕಣಕವು ಅಕ್ಕಿಯ

ಹಿಟ್ಟನಿಂದಲೇ ಆಗುತ್ತದೆ. ಹೊರಗಿನ 'ಕಣಕ'ಕ್ಕೆ ತಯಾರಿಸಿದ ಹಿಟ್ಟಿನಿಂದ ತಯಾರಾಗುವುದು ಈ ಅದ್ದಿಟ್ಟು. ಎಲ್ಲ ಭಕ್ಷ್ಯಗಳನ್ನೂ ತಯಾರಿಸಿದ ಅನಂತರ ಕೊನೆಯಲ್ಲಿ ಇದರ ತಯಾರಿಯಾಗುವುದರಿಂದ ಈ ಹಿಟ್ಟಿಗೆ, ಬೇರೆ ಲಕ್ಷ್ಯಗಳ ಮೂಲಪದಾರ್ಥಗಳು ಸೇರುವುದೂ ಉಂಟು. ಎಲ್ಲವನ್ನೂ ಕಲಸಿ ಒಲೆಯ ಮೇಲಿಟ್ಟ ಉರುಳಿಗೆ ಹೊಯ್ಯುವುದು; ಬೇಯಿಸಿ ತೆಗೆಯುವುದು; ಹಾಗೆ ತಯಾರಿಸಿದ ಪಾಕವೆ ಅದ್ದಿಟ್ಟೆಂದರೆ. ಎಂದರೆ ದೊಡ್ಡ ದೊಡ್ಡ ಗ್ರಂಥಗಳನ್ನು ಬರೆವಾಗ ಹಿಂದಿನ ಅಧ್ಯಾಯಗಳಲ್ಲಿ ಅಡಗದಿರುವ ವಿಷಯಗಳನ್ನೆಲ್ಲಾ ಒಟ್ಟುಮಾಡಿ ಅನುಬಂಧ ಎಂದು ಅಧ್ಯಾಯಗಳನ್ನು ಸೇರಿಸುತ್ತಾರಲ್ಲ? ಹಾಗೆಯೆ ಅದ್ದಿಟ್ಟೆಂಬುದು ಭಕ್ಷ್ಯಗಳ ಅನುಬಂಧ. ಅನುಬಂಧಗಳಲ್ಲಿ ಪ್ರತಿಪಾದಿಸಬಾರದ ವಿಷಯವೆಂಬುದಿಲ್ಲ. ಹಾಗೆಯೆ ಅದ್ದಿಟ್ಟನಲ್ಲಿ ಇಲ್ಲದ ರಸವಿಲ್ಲ. ಉಪ್ಪು, ಹುಳಿ, ಕಾರ, ಸಿಹಿ—ಹೆಚ್ಚೇನು? ಷಡ್ರಸಯುಕ್ತವಾದ ಭಕ್ಷ್ಯ ವಿಶೇಷವೇ ಇದು. ಅದರ ಆಕಾರ ವಿವರಣವನ್ನು ಮಾಡದಿದ್ದರೆ ಎಲ್ಲರಿಗೂ ಅದರ ಸಂಪೂರ್ಣ ಜ್ಞಾನವಾಗುವುದು ಕಷ್ಟ. ಅದ್ದಿಟ್ಟಿಗೆ ನಿಶ್ಚಿತವಾದ ಆಕಾರವೆಂಬುದಿಲ್ಲ. ಅದು ಒಮ್ಮೊಮ್ಮೆ ಹಿಂದುಸ್ಥಾನದಂತೆ ತ್ರಿಕೋಣಾಕೃತಿಯನ್ನು ಹೊಂದಿರಬಹುದು. ಇಂಗ್ಲೆಂಡು ದ್ವೀಪದಂತೆ ಸುತ್ತಲೂ ಒಡಕಾಗಿದ್ದು ಒಂದೆಡೆ ತೋರ, ಒಂದೆಡೆ ಸಪುರವಾಗಿರಬಹುದು. ಅರೇಬಿಯದಂತೆ ಒಮ್ಮೊಮ್ಮೆ ಚೌಕವಾಗಿರಲೂ ಬಹುದು. ಒಮ್ಮೊಮ್ಮೆ ದಕ್ಷಿಣ ಅಮೇರಿಕದಂತೆ, ಮೇಲೆ ದೊಡ್ಡದಾಗಿದ್ದು, ಕೆಳಕೆಳಗೆ ಬರುತ್ತಾ ಸಪುರವಾಗಿ, ದೊಡ್ಡ ತಲೆಯಿದ್ದು ಸಪುರ ಕಾಲುಗಳುಳ್ಳ ಮನುಷ್ಯನ ಆಕಾರ ಸ್ಮರಣೆಯನ್ನುಂಟುಮಾಡಲೂ ಬಹುದು. ಏರುತಗ್ಗುಗಳೂ ಹಾಗೆಯೆ. ಒಂದೆಡೆ ಹೆಚ್ಚು ಹಿಟ್ಟು ಬಿದ್ದು ದಪ್ಪವಾಗಿ ಎತ್ತರವಾಗಿ ಹಿಮಾಲಯ ಪರ್ವತದ ಪೃಷ್ಠಭೂಮಿಯಂತೆಯೂ, ಇನ್ನೊಂದೆಡೆ ತಗ್ಗಾಗಿ ಪರಶುರಾಮ ಕ್ಷೇತ್ರದಂತೆಯೂ ಇರಬಹುದೆನ್ನಿ. ಹೀಗಿರುವ ಭಕ್ಷ್ಯದ ರುಚಿಯೂ ಒಂದೊಂದು ಸ್ಥಳದಲ್ಲಿ ಒಂದೊಂದು ಎಂಬುದನ್ನು ಊಹಿಸಿಕೊಳ್ಳಿರಿ. ನಮ್ಮ ಪಾರ್ತಮ್ಮನು ಬೇಯಿಸಲು ಪ್ರಾರಂಭಿಸಿದುದು ಇದನ್ನೆ! ಹೆಮ್ಮಕ್ಕಳಿಗೆ ತಮ್ಮ ಕಿರಿಯ ಮಕ್ಕಳ ಮೇಲೂ ಅದ್ದಿಟ್ಟಿನ ಮೇಲೂ ಸಮಾನ ಪ್ರೀತಿ.

ಪಾರ್ತಮ್ಮನು ಅದ್ದಿಟ್ಟನ್ನು ಬೇಯಿಸುತ್ತಿದ್ದಳು. ಒಲೆಯೊಳಗೆ

ಬೆಂಕಿ ಧಗಧಗಿಸುತ್ತಿತ್ತು. ಉರುಳಿಯಲ್ಲಿದ್ದ ಎಣ್ಣೆ ಚುಯ್ಯೆಂದು ಕುದಿಯುತ್ತಿತ್ತು. "ದ್ವಾಪರಾಯುಗದಿ...." ಎಂಬ ನೂರು ಸೊಲ್ಲಿನ ಹಾಡು ಕೊನೆಯನ್ನು ಮುಟ್ಟುತ್ತಿತ್ತು. ಅಷ್ಟರಲ್ಲಿ ತುಂಗಮ್ಮನೇ ಬಂದಳು. ''ಏಳಿರಿ ಪಾರ್ತಮ್ಮ! ಇನ್ನು ನಾನೇ ಬೇಯಿಸುತ್ತೇನೆ'' ಎಂದಳು. ''ಯಾವ ಕೆಲಸವನ್ನೂ ಅರ್ಧದಲ್ಲಿ ಬಿಡುವ ಸ್ವಭಾವ ನನ್ನದಲ್ಲ. ಇಷ್ಟನ್ನು ಮುಗಿಸುತ್ತೇನೆ" ಎಂದು ಪಾರ್ತಮ್ಮ ಸೌಟನ್ನು ತಿರುಗಿಸುತ್ತಲೇ ಇದ್ದಳು. ತುಂಗಮ್ಮ ಬಳಿಯಲ್ಲೇ ಕುಳಿತು ತಾಂಬೂಲ ಹಾಕುತ್ತಿದ್ದಳು.

ಫಕ್ಕನೆ ಪಾರ್ತಮ್ಮನ ಹಾಡು ನಿಂತುಹೋಯಿತು. "ಅಯ್ಯೋ! ಈ ಅದ್ದಿಟ್ಟನ್ನು ಮಾಡುವಾಗ ನನ್ನ ಮಗಳು ಶಾರದೆಯ ನೆನಪಾಗುತ್ತದೆ. ಆಕೆಗೆ ಅದಿಟ್ಟೆಂದರೆ ಪ್ರಾಣ....ಆದರೆ ಯೋಗ್ಯತೆ ಬೇಕಷ್ಟೆ. ಅವಳಿಗೆ ಈ ನೆಲದ ನೀರು ಎಂದೋ ಮುಗಿದುಹೋಯಿತು" ಎಂದು ನಿಟ್ಟುಸಿರು ಬಿಟ್ಟಳು. ಕಣ್ಣುಜ್ಜಿದಳು.

''ಲೋಕದಲ್ಲಿ ಹುಟ್ಟುವ ಪ್ರತಿಯೊಬ್ಬನ ಹಣೆಯಲ್ಲಿಯೂ ವರ್ಷ, ತಿಂಗಳು, ದಿನ, ಗಳಿಗೆಯೂ ತಪ್ಪದಂತೆ ಇಂತಿಷ್ಟೆ ಆಯಸ್ಸೆಂದು ಆ ಬ್ರಹ್ಮ ಬರೆದಿರುವಾಗ ನಾವೇನು ಮಾಡಲಾಗುತ್ತದೆ ಪಾರ್ತಮ್ಮ!'' ಎಂದು ತುಂಗಮ್ಮನ ಸಮರ್ಥನೆ.

''ಅದು ನಿಜ. ಆದರೇನು? ಈ ಅದ್ದಿಟ್ಟನ್ನು ನೋಡಿದೊಡನೆ ಅವಳದೇ ನೆನಪು ನನಗೆ. ಅವಳಿಗೆ ಇದೆಂದರೆ ಪ್ರಾಣಸೋಡು. ಬೇರೇನೂ ಬೇಡ; ಪಂಚಭಕ್ಷ ಪರಮಾನ್ನವೂ ಬೇಡ. ಅದ್ದಿಟ್ಟೆಂದರೆ ಇಡೀ ದಿನ ಅದನ್ನೇ ಜಗಿಯುತ್ತ ಇರುವುದು. ಹಾ! ಅದ್ದಿಟ್ಟನ್ನು ತಿನ್ನಲು ಅವಳು ಇನ್ನೆಲ್ಲಿಂದ ಬರಬೇಕು?" ಎಂದು ಪಾರ್ತಮ್ಮನು ಮತ್ತಷ್ಟು ಕಣ್ಣುಜ್ಜಿದಳು. ಅದ್ದಿಟ್ಟನ್ನು ಮುಟ್ಟಿದ ಕೈಯಲ್ಲಿ ಅಂಟಿಕೊಂಡಿದ್ದ ರಸವನ್ನು ಕಣ್ಣೂ ಪರೀಕ್ಷಿಸಿದಂತೆ ತೋರುತ್ತದೆ. ಧಾರಾಕಾರವಾಗಿ ಕಣ್ಣೀರು ಸುರಿಯಿತು.

ಮತ್ತು ಹೇಳಿದಳು ಪಾರ್ತಮ್ಮ:—''ನನಗೆ ಅನುಕೂಲ ಕಡಿಮೆಯಾದರೂ ಸಂಸಾರ ದೊಡ್ಡದು ತುಂಗಮ್ಮ. ಹಬ್ಬ ಹುಣ್ಣಿಮೆ, ಶ್ರಾದ್ಧ ಮಹಾಲಯಗಳೇನಾದರೂ ಆದರೆ ಮನೆತುಂಬ ಮಂದಿಗಳು; ಮಕ್ಕಳು ಮರಿಗಳು; ನಮ್ಮ ಯಜಮಾನರು ಹೇಗಾದರೂ ಮಾಡಿ ಒಳ್ಳೊಳ್ಳೆಯ

ಭಕ್ಷ್ಯಭೋಜ್ಯಗಳನ್ನು ಮಾಡಿಸದೆ ಇರುತ್ತಿರಲಿಲ್ಲ. ಏಳು ಸೇರು ಹಿಟ್ಟಿನ ಹೋಳಿಗೆ ಮಾಡಿಸುವುದು ನಮ್ಮ ಪದ್ಧತಿ. ಬೇಡಿ ಕಾಡಿ ಸಾಮಾನು ತಂದರೂ ಹೋಳಿಗೆಯಾಗಬೇಕು ನೋಡು! ನಮ್ಮ ಯಜಮಾನರ ನಾಲಗೆ ಅಂತಹದು....ಆದರೆ ನಮ್ಮ ಶಾರದೆಗೆ ಅದೊಂದೂ ಬೇಡ.... ತಂದೆಯ ಹಾಗೆ ಸವಿಯಾದ ಭಕ್ಷ್ಯಗಳನ್ನು ತಿನ್ನುವ ಯೋಗ್ಯತೆ ಅವಳಲ್ಲಿರಲಿಲ್ಲ. ಆದರೆ ಒಂದು ಅದ್ದಿಟ್ಟು ಇದ್ದರೆ ಆಯಿತು. ಅವಳು ಮನೆಗೆ ಬಂದರೆ ಒಂದು ಕುಡಿಕೆ ತುಂಬ ಅದ್ದಿಟ್ಟು ಮಾಡಿ ಅವಳ ವಶಕ್ಕೆ ಒಪ್ಪಿಸಿಬಿಡುತ್ತಿದ್ದೆ. . . . .ಆದರೆ ಯೋಗ್ಯತೆ ಎಂಬುದು ಪ್ರತಿಯೊಂದರಲ್ಲಿಯೂ ಇದೆ. ಅದ್ದಿಟ್ಟು ತಿನ್ನಲೂ ಯೋಗ್ಯತೆ ಬೇಕು. ಬ್ರಹ್ಮ ಹಾಗೆಯೇ ಬರೆದಿರಬೇಕು. ಅಯ್ಯೋ! ನನಗೆ ಪ್ರತಿಯೊಂದು ಬಾರಿಯೂ ಅದ್ದಿಟ್ಟು ಮಾಡುವಾಗ ಅವಳ ನೆನಪೇ ತುಂಗಮ್ಮ" ಹೀಗೆನ್ನುವಷ್ಟರಲ್ಲಿ ಆಕೆಯ ಸ್ವರ ನಡುಗಿತು.

"ಹೆಣ್ಣಾಗಿ ಹುಟ್ಟುವುದು ಕಷ್ಟ ಪಾರ್ತಮ್ಮ. ಕೈಹಿಡಿದ ಗಂಡ ಒಳ್ಳೆಯವನಾದರೆ ಆಯಿತು. ಇಲ್ಲವಾದರೆ ನೋಡು ಅಗಸನ ಕತ್ತೆಗಿಂತಲೂ ಕಡೆ ಆಕೆಯ ಅವಸ್ಥೆ . . .ಹೌದು . . .ಪಾರ್ತಮ್ಮ . . .ಶಾರದೆಯ ಕಥೆಯನ್ನು ಕೇಳಿದ್ದೇನೆ" ಎಂದಳು ತುಂಗಮ್ಮ.

ಪಾರ್ತಮ್ಮ:—"ನೀನು ಕೇಳಿದ್ದೇನು? ಎರಡು ವರ್ಷಗಳ ಹಿಂದೆ ಶಾರದೆ ಹೆರಿಗೆಯ ಕಷ್ಟದಿಂದ ತೀರಿಹೋದಳೆಂದಲ್ಲವೇ? ಆಕೆ ಸತ್ತಳು ಸತ್ತ ದನದ ಶವವನ್ನು ಒಯಿದುಕೊಂಡು ಹೋಗುತ್ತಾರಲ್ಲ.? ಹಾಗೆ ಅವಳ ಹೆಣವನ್ನು ಶ್ಮಶಾನಕ್ಕೆ ಒಯ್ದರು ಎಂದು ಇಷ್ಟಲ್ಲವೇ ನೀನು ಕೇಳಿದುದು.

ತುಂಗಮ್ಮ:—"ಹೌದು; ಏಳು ತಿಂಗಳ ಗರ್ಭಿಣಿಯಾಗಿದ್ದಾಗಲೆ ಎಲ್ಲವೂ ಆಗಿಹೋಯಿತೆಂದು ಕೇಳಿದೆ."

ಪಾರ್ತಮ್ಮ:—"ಅಲ್ಲ; ಗಂಡನ ಮನೆಯಲ್ಲಿ ಹುಡುಗಿಗೆ ಏನು ಕಷ್ಟ ಬಂದರೂ ಕೊಟ್ಟ ಮನೆಯವರು ಹೇಳಬಾರದು. ಒಂದುವೇಳೆ ಹೇಳಿದರೆ ನನ್ನ ಕೈಬಿಟ್ಟು ಹೋದ ಆ ಮುದ್ದು ಮಗಳು ಬರುವಂತಿಲ್ಲ. ಆಕೆಯ ಆಯುಷ್ಯ ಮುಗಿಯಿತೆಂದೆ ಹೇಳಿ ನಾವು ಸಮಾಧಾನ ಮಾಡಿಕೊಳ್ಳಬೇಕು. ಆದರೂ ಹೆತ್ತ ತಾಯಿಯಲ್ಲವೇ? ಎಲ್ಲ ನೆನಪಾಗುತ್ತದೆ. ಆಕೆಯ ಪ್ರೀತಿಯ ತಿನಿಸುಗಳನ್ನು ನೋಡುವಾಗ ಆಕೆ ಇರುತ್ತಿದ್ದರೆ

ಸಂತೋಷದಿಂದ ತಿಂದು ಹೇಗೆ ನಮ್ಮೊಡನೆ ನಗುಮಾತುಗಳನ್ನಾಡಿ ಸಂತೋಷಪಡುತ್ತಿದ್ದಳು! ಎಂಬ ಎಣಿಕೆಯಾಗುತ್ತಿದೆ........ಇಷ್ಟೆ........

ತುಂಗಮ್ಮನು ಈ ಮಾತಿಗೆ ಒಪ್ಪಲೇಬೇಕಾಯಿತು. “ನನಗೆ ಸಮೀಪದವರಲ್ಲಿ ಯಾವುದನ್ನೂ ಮುಚ್ಚಿಡುವ ಕ್ರಮವಿಲ್ಲ. ಹೇಳಬಾರದೆಂದಿದ್ದರೂ ಹೇಳದೆ ಮನಸ್ಸು ಕೇಳುವುದಿಲ್ಲ” ಎಂದು ಪಾರ್ತಮ್ಮ ಪೀಠಿಕೆ ಹಾಕಿಯೆಬಿಟ್ಟಳು.

‘ಸಹಜವಲ್ಲವೇ ಅದು’ ಎಂದು ತುಂಗಮ್ಮ ಕೇಳುವುದಕ್ಕೆ ಸಿದ್ಧತೆ ಮಾಡಿದಳು.

ಪಾರ್ತಮ್ಮ ಆದ್ದಿಟ್ಟಿನ ಕಥೆಯನ್ನು ಹೇಳುವುದಕ್ಕೆ ತೊಡಗಿದಳು.

* * * *

ನನ್ನ ಹುಡುಗಿಗೆ ಮದುವೆಯಾಗುವಾಗ ಹದಿನಾಲ್ಕು ವರ್ಷವಾಗಿತ್ತು. ವರ ವರ ಎಂದು ಊರೆಲ್ಲ ಸುತ್ತಿದ್ದಾಯಿತು. ನಮ್ಮಂತಹ ಬಡವರಲ್ಲಿ ಏನಿದೆ? ಹಣವಿದೆಯೇ? ಹುಡುಗಿಗೆ ಕೊಡಲು ಚಿನ್ನವಿದೆಯೇ? ಬಡವರ ಹುಡುಗಿಯ ರೂಪ ನೋಡಿ ಕೈಯೊಡ್ಡುವವರು ಯಾರಿದ್ದಾರೆ ಲೋಕದಲ್ಲಿ? ಹುಡುಗಿಯ ಮಾತು ಬಂದರೆ ಹಣವೆಷ್ಟು ಕೊಡುತ್ತೀರಿ ಎಂಬ ಪ್ರಶ್ನೆಯೇ ಮೊದಲು ಬರುತ್ತದೆ. ಕುಲವನ್ನು ನೋಡುವವರಿಲ್ಲ. ಹುಡುಗಿಯರ ತಾಯಿತಂದೆಗಳ ಗುಣವನ್ನು ನೋಡುವವರಿಲ್ಲ. ಬಂಧು ಬಳಗದವರ ಸ್ವಭಾವವನ್ನು ನೋಡುವವರಿಲ್ಲ. ನಮಗೆ ಹೇಗೊ ಹುಡುಗಿಯನ್ನು ದಾಟಿಸದೆ ನಿರ್ವಾಹವುಂಟೆ? ಹದಿನಾಲ್ಕು ವರ್ಷಗಳಾಗುವ ವರೆಗೆ ಊರೂರು ಅಲೆದರು ಯಜಮಾನರು. ಅವರು ಒಂದು ದಿನವಾದರೂ ಮನೆಯಲ್ಲಿರುವುದೆಂದಿಲ್ಲ. ಅವರಿಗೆ ಗೊತ್ತಿಲ್ಲದ ಮಂದಿಯೂ ಊರಲ್ಲಿಲ್ಲ. ದೊಡ್ಡ ದೊಡ್ಡ ಕ್ರಿಯೆಗಳನ್ನು ಮಾಡಿಸುವುದಕ್ಕೂ ಅವರೇ ಬೇಕು. ಆದರೇನು? ಹುಡುಗಿಗೆ ಮನೆಯಾಗಲಿಲ್ಲ. ಕೊನೆಗೆ ಹುಡುಕಿ ಹುಡುಕಿ ಬೇಸತ್ತು ಒಂದು ಕಡೆ ವರನನ್ನು ನಿಶ್ಚೈಸಿದೆವು. ಆ ದಿನ ಈ ದಿನ ಆ ಮುಹೂರ್ತ ಈ ಮುಹೂರ್ತ ಎಂದು ನೋಡಲಿಲ್ಲ. ಧಾರೆಯೆರೆದು ಕೊಟ್ಟೇಬಿಟ್ಟೆವು. ಹುಡುಗನೇನೋ ಕೆಟ್ಟವನಂತೆ ಕಾಣಿಸಲಿಲ್ಲ. ವೃತ್ತಿಯಾದರೂ ನಮ್ಮದೆ. ವೈದಿಕ ವೃತ್ತಿಯವರಿಗೆ ಐಶ್ವರ್ಯವಿರುವುದು ಕಡಿಮೆಯಾದರೂ ಊಟಕ್ಕೆ ಕಡಿಮೆ

ಯೆಂದಿಲ್ಲ. ಲೋಕದಲ್ಲಿ ಸಾವು ಹುಟ್ಟುಗಳು ಆಗದಿರುವುದುಂಟೆ? ಸಾವು ಹುಟ್ಟುಗಳಾದಲ್ಲಿ ಪುರೋಹಿತರು ಹೋಗದಿರುವುದುಂಟೆ? ಹೋದಲ್ಲಿ ಏನಾದರೂ ದಕ್ಷಿಣೆ ದೊರೆಯದುಂಟೆ? ಅಕ್ಕಿಕಾಯಿ, ಧಾನ್ಯ ಬಾಯಿನ ಎಂದು ಏನಾದರೂ ಸಿಕ್ಕದಿರುವುದುಂಟೆ? ಶಾರದೆಯ ಗಂಡ ನಾರಾಯಣನು ಒಳ್ಳೆಯ ರೀತಿಯಲ್ಲಿ ಕ್ರಿಯಾಭಾಗಗಳನ್ನು ಮಾಡಿಸುತ್ತಿದ್ದ. ಮನೆಗೆ ಬರುವಾಗ ಒಂದು ಹೊರೆ ಸಾಮಾನು ಬಾರದೆ ಇರುತ್ತಿರಲಿಲ್ಲ. ಹೀಗಾಗಿ ಅವರಿಗೆ ದಾರಿದ್ರ್ಯವೆನ್ನುವಷ್ಟು ಬಡತನವಿರಲಿಲ್ಲ. ಆದರೆ ಪುಣ್ಯಬೇಕಷ್ಟೆ ನಮಗೆ? ಗಂಡಹೆಂಡಿರು ಸುಖವಾಗಿದ್ದು ವರ್ಷಕ್ಕೊಮ್ಮೆಯಾದರೂ ಬಂದುಹೋಗುವುದನ್ನು ನೋಡುವ ಭಾಗ್ಯವು ನಮಗಿರಬೇಕಷ್ಟೆ?........ಇದೊಂದೇ ಕಡಿಮೆಯಾದುದು. ನಾರಾಯಣನ ಸಿಟ್ಟಿ ಇದಕ್ಕೆ ಕಾರಣ. ಹುಡುಗನೇನೋ ಒಳ್ಳೆಯವ. ಆದರೆ ಅಕ್ಕತಂಗಿಯರ ಮಾತಿಗೆ ಒಳಗಾಗುವವನು ಆತ. ಗಂಡನ ಮನೆಯಲ್ಲಿರದೆ ತವರುಮನೆ ಸೇರುವ ಹೆಂಗುಸರಿಗೆ ಮತ್ತೇನು ಕೆಲಸ ತುಂಗಮ್ಮ! ಅಣ್ಣತಮ್ಮಂದಿರ ಹೆಂಡಿರಲ್ಲಿ ಇಲ್ಲದ ದೋಷಗಳನ್ನು ಹುಡುಕುವುದು. ಚಾಡಿ ಹೇಳುವುದು. ಜಗಳವೆಬ್ಬಿಸುವುದು. ಏನಾದರೂ ಹೊಡೆದಾಟ ಮಾಡಿಸುವುದು............ಇದರಿಂದಾಗಿ ಶಾರದೆಗೆ ಗಂಡನ ಮನೆಯಲ್ಲಿ ಒಂದು ದಿನ ಸುಖವಿರಲಿಲ್ಲ. ಒಂದು ದಿನ ಹೊಟ್ಟೆ ತುಂಬ ಊಟವಿರಲಿಲ್ಲ. ಒಂದು ದಿನ ಬೈಗಳೂ ಪೆಟ್ಟೂ ತಪ್ಪಿದುದಿಲ್ಲ. ಸಾಯುವ ವರೆಗೂ ಗಂಡನ ಪೆಟ್ಟು ತಿಂದುಕೊಂಡೇ ಇದ್ದಳು ನನ್ನ ಮಗಳು. ಆದರೂ ಈ ಕಾಲದ ಹುಡುಗಿಯರಂತಲ್ಲ ಆಕೆ. ಗಂಡ ಹೊಡೆಯಲಿ ಬಡಿಯಲಿ, ಬೇಕಾದರೆ ಕೊಲ್ಲಲಿ, ಪಿಟ್ಟೆಂದು ಮಾತಾಡುವ ಸ್ವಭಾವದವಳಲ್ಲ ನನ್ನ ಶಾರದೆ.... ಅಂಥ ಮಗಳನ್ನು ಇಟ್ಟುಕೊಂಡಿರಬೇಕಾದರೆ ತಾಯಿತಂದೆಗಳು ಪೂರ್ವ ಜನ್ಮದಲ್ಲಿ ಎಷ್ಟೋ ಪುಣ್ಯವನ್ನು ಸಂಪಾದನೆಮಾಡಿರಬೇಕು.

ತುಂಗಮ್ಮ ಈ ಮಾತಿಗೆ ಮೌನವಾಗಿ ಸಮ್ಮತಿಸಿದಳು. ಪಾರ್ತಮ್ಮ ಮುಂದುವರಿಸಿದಳು.

ಇದಿಷ್ಟು ಅವಳ ಗಂಡನ ಮನೆಯ ಅವಸ್ಥೆ. ನಮ್ಮ ಶಾರದೆ ಬಹಳ ಮಾನಸ್ಥೆ ನೋಡಿ. 'ಶಾಸ್ತ್ರಿಗಳ ಹಿರಿಯ ಮಗಳು. ನಡೆನುಡಿಯಲ್ಲಿ ಏನಾದರೂ ಒಂದಿಷ್ಟು ಕೋಲಕಟ್ಟಿದರೆ ನಮ್ಮ ಕುಲಕ್ಕೆ ಹೆಸರು

ಬಂದೀತು' ಎಂದು ಯಜಮಾನರು ಯಾವಾಗಲೂ ಹೇಳುತ್ತಿದ್ದರು. ಸಾವಿತ್ರೀ ಸತ್ಯವಾನರ ಕಥೆ, ನಳದಮಯಂತೀ ಕಥೆ—ಹೀಗಿರುವ ಎಲ್ಲ ಪುಣ್ಯಕಥೆಗಳನ್ನು ಕೇಳಿಯೆ ದೊಡ್ಡವಳಾದುದು ನಮ್ಮ ಶಾರದೆ. ಅಯ್ಯೊ! ಹಿರಿಯರಲ್ಲಿ ಮಾತಾಡುವುದೆಂದರೆ ಅವಳದೆಷ್ಟು ವಿನಯ! ಅವಳಿಗೆಷ್ಟು ಭಯ! ಎಂತಹ ಸೌಮ್ಯವಾದ ನುಡಿ! ನಮ್ಮ ಹುಡುಗಿಯೆಂದು ಹೊಗಳಿಕೊಳ್ಳುವುದಲ್ಲ. ನಾವು ಹತ್ತು ಮಾತಾಡಿದರೆ ಅವಳು ಒಂದು ಮಾತಾಡುವವಳಲ್ಲ. ಈಗಿನ ಹುಡುಗಿಯರಂತೆ ಕೊಂಕು ಕೋರೆಗಳನ್ನು ತಿಳಿಯದವಳು; 'ಮುಟ್ಟಲು ಬಂದರೆ ಕಚ್ಚಲು ಬರುತ್ತದೆ' ಎಂದು ಏಡಿಯ ವಿಷಯವಾಗಿ ಒಗಟು ಹೇಳುತ್ತಾರಲ್ಲ! ಹಾಗೆ ಈಗಿನ ಹುಡುಗಿಯರ ಮಾತು. ಒಂದಾಡಿದರೆ ಹತ್ತು ಉತ್ತರ. ನನ್ನ ಶಾರದೆ—ನನ್ನ ಹಿರಿಯ ಮಗಳು–ನನ್ನ ಯಜಮಾನರ ಪ್ರೀತಿಯ ಬೊಂಬೆ—ಆಕೆಗೆ ಈಗಿನ ಸೋಗೇನೂ ತಿಳಿಯದಮ್ಮ. ಇದೇ ಅವಳ ತಪ್ಪಾಯಿತು ನೋಡು. ಆಕೆಯ ಅತ್ತಿಗೆಯಷ್ಟೆ ಬಾಯಿ ಅವಳಿಗಿದ್ದರೆ ಅವಳೂ ಬದುಕುತ್ತಿದ್ದಳೊ ಏನೋ! ಆದರೆ ಅಂಥ ಬದುಕು ಯಾಕೆ ತುಂಗಮ್ಮ? ಹೆಂಗುಸಾಗಿ ಹುಟ್ಟಿದ ಮೇಲೆ ಹೆಂಗುಸಿನಂತೆಯೆ ಇರಬೇಕು, ಹಾಗಿದ್ದರೆ ಸೊಗಸು. ಬಜಾರಿಯಂತಿದ್ದರೆ ಏನು ಫಲ! ಅಂತೂ ನನ್ನ ಶಾರದೆ ಹಳೆ ಹೆಂಗುಸರ ಕೂಟದವಳು. ಆಕೆಯನ್ನು ಕೊಟ್ಟುದು ಮಾತ್ರ ಕೋಗಿಲೆ ಮರಿಯನ್ನು ಕಾಗೆಗಳ ವಂಶಕ್ಕೆ ಧಾರೆಯೆರದು ಕೊಟ್ಟಂತಾಯಿತು; ಅಷ್ಟೆ ವ್ಯಥೆ! ಒಳ್ಳೆಯ ಮಾತುಗಳನ್ನೆ ಕೇಳಿ, ಇದ್ದಷ್ಟು ದಿನ ಸುಖವಾಗಿದ್ದು, ನಾಲ್ಕು ದಿನ ಮೊದಲೇ ಸಾಯುತ್ತಿದ್ದರೂ ನನಗೆ ವ್ಯಸನವಾಗುತ್ತಿರಲಿಲ್ಲ! ಆದರೆ ಸತ್ತುದು ಹೀಗೆ ನೋಡು! ನಾಲ್ಕು ಜನರ ಮಾತಿಗೆ ಆಸ್ಪದವಾಯಿತು; ಅಷ್ಟೆ!

ನನ್ನ ಅಳಿಯನ ಮನೆಯಲ್ಲಿ ಯಾವಾಗಲೂ ಜಗಳ ತಪ್ಪುತ್ತಿರಲಿಲ್ಲವೆಂದು ಹೇಳಿದೆನಲ್ಲ. ಅದಕ್ಕೆ ಮುಖ್ಯ ಕಾರಣ ನನ್ನ ಮಗಳನ್ನು ನಾರಾಯಣನು ಮದುವೆಯಾದುದು. ಬೇರೆ ಯಾವ ಬಜಾರಿ ಹೆಂಗುಸನ್ನಾದರೂ ಮದುವೆಯಾಗಿದ್ದರೆ ಹೀಗೆಲ್ಲ ಆಗುತ್ತಿರಲಿಲ್ಲ. "ಕೇರೆ ತಿನ್ನುವ ಊರಿಗೆ ಹೋದರೆ ನಡುವಿನ ತುಂಡಿಗೆ ಕೈನೀಡಬೇಕು" ಎಂದೊಂದು ಗಾದೆಯಿದೆ. ಮಾನಸ್ಥೆಯಾದ ನನ್ನ ಮಗಳಿಗೆ ಹಾಗೆಲ್ಲ ತಿಳಿಯದು.

ತಂದೆ ಕಲಿಸಿದ ಬುದ್ಧಿ—ತಾಯಿ ಕಲಿಸಿದ ನಡತೆ—ಇದೆಲ್ಲಿಗಾದರೂ ಬಿಟ್ಟು ಹೋಗುತ್ತದೆಯೇ? ಇಷ್ಟೆಲ್ಲ ಹೇಳಿದುದು ಏಕೆಂದರೆ ನಾರಾಯಣನ ಅಕ್ಕನೊಬ್ಬಳು ತವರುಮನೆಯಲ್ಲಿದ್ದಾಳೆಂದು ಹೇಳಿದೆನಲ್ಲ? ಅವಳ ವಿಷಯಕ್ಕಾಗಿ ಹೇಳಬೇಕಾಯಿತು ಹೀಗೆ. ಅವಳು ಒಂದು ತರದ ಹೆಂಗುಸು. ಗಂಡನೇ ಅವಳನ್ನು ಬಿಟ್ಟುದೋ ಅವಳೇ ಗಂಡನನ್ನು ಬಿಟ್ಟುದೋ ಗೊತ್ತಿಲ್ಲ. ಅಂತು ಅವಳಿರುವುದು ತಮ್ಮನ ಮನೆಯಲ್ಲಿ. ನಾರಾಯಣನು ಚಿಕ್ಕ ಹುಡುಗನಾಗಿದ್ದಾಗ ಮನೆತುಂಬ ಮಂದಿಗಳಿದ್ದರು. ಆತನ ತಂದೆಯಿದ್ದ; ತಾಯಿಯಿದ್ದಳು: ಎಲ್ಲರೂ ಇದ್ದರು; ಆಗ ಆಕೆಯ ಆಟವೇನೂ ಗೊತ್ತಾಗಲಿಲ್ಲ. ಮತ್ತೆ ಒಬ್ಬೊಬ್ಬರೆ ಹೋದರು—ಎಂದರೆ ತೀರಿ ಹೋದರು. ಮತ್ತೆ ಆಕೆಯ ಆಟವನ್ನು ಹೇಳುವುದೇನು ತುಂಗಮ್ಮ! ಗ್ರಹಚಾರ ವಶದಿಂದ ನಮ್ಮ ಹುಡುಗಿಯನ್ನು ನಾರಾಯಣನಿಗೆ ಕೊಟ್ಟು ಮದುವೆಯಾದ ಮೇಲೆ ಹುಚ್ಚು ಕುದುರೆಗೆ ಕಡಿವಾಣ ಕಟ್ಟಿದಂತಾಯಿತು. ಶಾರದೆ ಎಷ್ಟಾದರೂ ಹೊಸಬಳು; ಎಷ್ಟೆಂದರೂ ಮನೆಗೆ ಯಜಮಾನಿ; ಮಾನಸ್ಥೆ; ಕಂಡಕಂಡ ಗಂಡುಸರೊಡನೆ ಜಾವ ಹೊತ್ತು ಸರಸಸಲ್ಲಾಪ ಮಾಡುವವಳಲ್ಲ; ಶಾರದೆಯು ಅತ್ತಿಗೆಗಿದು ತೊಂದರೆಗೆ ಕಾರಣವಾಯಿತು. ಆದುದರಿಂದಲೆ ಮನೆಯೊಳಕ್ಕೆ ಜಗಳಕ್ಕೆ ಪ್ರಾರಂಭವಾಯಿತು ತುಂಗಮ್ಮ. ಹೆಂಗುಸರಿಗೆ ಜಗಳ ಮಾಡುವುದಕ್ಕೆ ಕಲಿಸಬೇಕೇ? ಒಂದು ಮನೆಯಲ್ಲಿ ಒಂದೇ ಹೆಂಗುಸಿದ್ದರೆ ಲೇಸು ನೋಡು. ಇಬ್ಬರು ಹೆಂಗುಸರಿದ್ದರೆ ಮನೆಯೂ ಎರಡಾಗದೆ ಇರದು. ಎರಡಾಗದಿದ್ದರೆ ದಿನಂಪ್ರತಿ ಸಹಸ್ರನಾಮ ತಪ್ಪದು. ನಾರಾಯಣನು ಹೇಗೆಂದರೂ ನನ್ನ ತಮ್ಮ; ಶಾರದೆ ತಮ್ಮನ ಹೆಂಡತಿಯೇ ಆದಳಷ್ಟೆ. ತಮ್ಮನೇ ತನಗೆ ಹೆದರಿ ನಡೆಯುತ್ತಾನೆ; ಎಂದಮೇಲೆ ತಮ್ಮನ ಹೆಂಡತಿಯ ಪಾಡೇನು? ಶಾರದೆಯು ಮೊದಮೊದಲು ಅತ್ತಿಗೆ ಏನುಮಾಡಿದರೂ ಮಾತಾಡುತ್ತಿರಲಿಲ್ಲ; ಇದು ಸ್ವಲ್ಪ ಕಾಲ ನಡೆಯಿತು. ಆದರೆ ಎಷ್ಟು ದಿನ ಸಹಿಸಲಾದೀತು ತುಂಗಮ್ಮ? ಒಳ್ಳೆಯ ಶಾಸ್ತ್ರಿಗಳ ಪರಿಶುದ್ಧವಾದ ಮನೆತನದಲ್ಲಿ ಹುಟ್ಟಿ ನೀತಿಗೆಟ್ಟವಳ ನಡತೆಯನ್ನು ನೋಡಿಕೊಂಡೂ ಆಕೆಯ ಬೈಗಳನ್ನು ಕೇಳಿಕೊಂಡೂ ನನ್ನ ಶಾರದೆ ಹೇಗೆ ಕುಳಿತುಕೊಂಡಾಳು? ನೀನು ಹೇಳು. ಶಾರದೆಯ ಬದಲು ನೀನಾಗಿದ್ದರೆ ಏನು

ಮಾಡುತ್ತಿದ್ದೆ? ಅವಳ ಕೆಟ್ಟ ನಡತೆಯನ್ನು ಸಹಿಸಿಕೊಂಡು, ಇಡೀ ವಂಶಕ್ಕೆ, ವಂಶದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೆ, ಸತ್ತುಹೋದವರಿಗೆ, ಮುಂದೆ ಹುಟ್ಟುವವರಿಗೆ, ಬಂಧುಗಳಿಗೆ, ಬಳಗದವರಿಗೆ, ನೋಡಿದವರಿಗೆ, ಕೇಳಿದವರಿಗೆ ನಾಚಿಕೆಯುಂಟುಮಾಡುವ ನಡತೆಯನ್ನು ನೋಡಿ ನೋಡಿ, ಹೇಗೆ ಸಹಿಸಿಕೊಳ್ಳುತ್ತಿದ್ದೆ ತುಂಗಮ್ಮ? ಒಂದು ದಿನ ಈ ವಿಚಾರ ಶಾರದೆಯ ಗಂಡ ನಾರಾಯಣನ ಕಿವಿಗೂ ಬಿದ್ದಿತು. ಯಾರ ಬಾಯಿಯಿಂದ ಬಿದ್ದುದೆಂದು ನನಗಂತೂ ಗೊತ್ತಿಲ್ಲ. ನಿಮ್ಮಲ್ಲಿ ಸುಳ್ಳು ಹೇಳುತ್ತೇನೆಯೇ? ನನಗೆ ನಿಜವಾಗಿಯೂ ತಿಳಿಯದು. ಒಂದುವೇಳೆ ನನ್ನ ಶಾರದೆಯೆ ಗಂಡನಿಗೆ ಈ ವಿಷಯವನ್ನು ತಿಳಿಸಿದುದೂ ಆಗಿರ ಬಹುದು. ಗಂಡನಲ್ಲಿ ಹೇಳಿದರೆ ತಪ್ಪೇನು? ಪತಿವ್ರತೆ ಹೇಳದೆ ಹೇಗೆ ಇದ್ದಾಳು?

ನಾರಾಯಣನಿಗೆ ಪಾಪ! ಮನೆಯಲ್ಲಿ ಕುಳಿತುಕೊಳ್ಳಲು ಅರೆ ನಿಮಿಷ ಪುರುಸತ್ತಿಲ್ಲ. ಇಂದು ಉಪನಯನ; ನಾಳೆ ಶ್ರಾದ್ಧ; ನಾಡಿದು ಸೀಮಂತ—ಹೀಗೆ ಶಿಷ್ಯವರ್ಗದ ಮನೆಯಲ್ಲಿಯೆ ಆತನ ಸುಳಿದಾಟ; ನಮ್ಮ ಬೀಗರಿದ್ದಾಗ, ಕೆಲವಕ್ಕೆ ಅವರು ಹೋಗುತ್ತಿದ್ದರು; ಕೆಲವಕ್ಕೆ ಇವನು ಹೋಗುತ್ತಿದ್ದ. ಈಗ ಭಾರವೆಲ್ಲ ಇವನ ತಲೆಯ ಮೇಲೆ. ಅದರೊಂದಿಗೆ ಈ ಸಮಾಚಾರ. ಕೇಳುವುದೇನು? ಒಣಗಿದ ಮರಕ್ಕೆ ಬೆಂಕಿ ಹಚ್ಚಿದಂತಾಯಿತು. ನಾರಾಯಣನಿಗೆ ಸಿಟ್ಟುಬಂತು. ಯಾರ ಮೇಲೆ? ಮೊದಲು ಅಕ್ಕನ ಮೇಲೆ. ಆದರೆ ಅಕ್ಕ ಗಣ್ಯಮಾಡು ತ್ತಾಳೆಯೇ? ಯಾರೋ ಒಬ್ಬ ಹಸಿಭಟ್ಟರ ಮನೆಯಲ್ಲಿ ಬೀದಿಬಸವಿ ಯಂತಿದ್ದ ಹುಡುಗಿಯನ್ನು ತಂದು ಕೊರಳಿಗೆ ಕಟ್ಟಿಕೊಂಡಿದ್ದಿ. ಅವಳಿಂದ ನನಗೆ ಮನುಧರ್ಮಶಾಸ್ತ್ರವನ್ನು ಹೇಳಿಸುತ್ತೀ. ಹೌದೋ, ನಾರಾಯಣ! ನೀನು ಹುಟ್ಟುವ ಮುಂಚೆ ನಾನು ಹುಟ್ಟಿದ್ದೆನಲ್ಲ? ನಿನಗೆ ಮೀಸೆ ಬರುವ ಮುಂಚೆ ನನಗೆ ಈ ಅವಸ್ಥೆಯಾಗಿತ್ತಲ್ಲ? ನನಗೆಷ್ಟು ಸಲ ಇಂತಹ ಕೆಟ್ಟ ಹೆಸರು ಬಂದಿದೆಯೊ? ನಿನ್ನೊಬ್ಬನ ಕಾಲದಲ್ಲಿ ಅಪಕೀರ್ತಿ ಕೇಳಬೇಕಾಯಿತು. ನಿನ್ನನ್ನು ಹುಟ್ಟಿದಂದಿನಿಂದ ಸಾಕಿದಾಕೆ ನಾನು. ಗಂಡುಸಾದವನ ಸ್ವಭಾವವೆ ಇದು. ಮದುವೆಯಾಗುವ ಮುಂಚೆ ಅಕ್ಕ—ತಂಗಿ—ತಾಯಿ—ಅಜ್ಜಿ. ಮತ್ತೆ ಹೆಂಡತಿಯೊಂದೇ

ಅವನ ಕುಲದೈವ. ಹೆಂಡತಿಯ ದಾಸನಾಗಿ, ಅವಳಿಗೆ ದಿನಕ್ಕೆ ಹತ್ತು ಬಾರಿ ಸುತ್ತುಬಂದು ಗಂಟೆಜಾಗಟೆ ಹೊಡೆದುಕೊಂಡು ಹೆಂಡತಿಯ ಕೀರ್ತನೆಮಾಡುವ ಹಣೆಬರಹ ಪ್ರತಿಯೊಬ್ಬನ ಹಣೆಯಲ್ಲಿಯೂ ಬರೆದೇ ಇದೆ. ಇದಕ್ಕೆ ನೀನೊಬ್ಬ ಹೊರಗೇ? ನನಗಿಷ್ಟು ಪ್ರಾಯವಾಯಿತು ನಾರಾಯಣ. ನನಗೆ ಕೆಟ್ಟ ಹೆಸರು ಬಂದರೆ ಆ ಹೆಸರು ಕೇಳಿಕೊಂಡು ಬದುಕುವ ಹೆಚ್ಚುಕಾಲವಿಲ್ಲ. ನಿನ್ನ ಹೆಂಡತಿಯ ಸಮಾಚಾರ ನೋಡಿಕೊ. ಇನ್ನೊಬ್ಬಳ ಮೇಲೆ ಅಪವಾದ ಹೇಳುವ ನಾಲಗೆ ಎಂತಹ ನಾಲಗೆ? ಆ ಹೆಣ್ಣು ಎಂತಹ ಹೆಣ್ಣು! ನೀನೇ ನೋಡಿಕೋ! ನಾನು ಈ ಮನೆಯಿಂದ ಇಂದೇ ಹೊರಡುತ್ತೇನೆ. ನನಗೆ ಕುಶಿಬಂದಲ್ಲಿಗೆ ಹೋಗುತ್ತೇನೆ. ನನಗಂತೂ ಕೆಟ್ಟ ಹೆಸರು ಬಂತಲ್ಲ. ಆದರೆ ಈ ಸಾವಿತ್ರಿಯನ್ನು, ಈ ದಮಯಂತಿಯನ್ನು ಕಟ್ಟಿಕೊಂಡು ನೀನು ಗೃಹಕೃತ್ಯ ನಡಿಸಬೇಕಾದರೆ, ಅಪಕೀರ್ತಿ ಕೇಳದಿರಬೇಕಾದರೆ, ನಿನ್ನ ಮನೆ ಸುತ್ತಲೂ ದೊಡ್ಡ ಕೋಟೆ ಹಾಕಿಸಬೇಕು; ಇಲ್ಲವಾದರೆ ಊರಲ್ಲಿರುವ ಗಂಡಸರನ್ನೆಲ್ಲ ಓಡಿಸಬೇಕಾದೀತು. . . . . . . ಎಂದು ಒಮ್ಮೊಮ್ಮೆ ಕಣ್ಣೀರು ಸುರಿಸುತ್ತಾ ಒಮ್ಮೊಮ್ಮೆ ಕಣ್ಣಿನಿಂದ ಕಿಡಿ ಹಾರಿಸುತ್ತಾ ಹೇಳಿದಳು ಆ ಹಿಡಿಂಬೆ. ನಾನು ಏನು ಹೇಳಲಿ ತುಂಗಮ್ಮ ಮಗಳ ಅವಸ್ಥೆಯನ್ನು! ಅಂದೇ ಅವಳ ಆಯುಸ್ಸಿಗೆ ಯಮನ ಬೀಗಮುದ್ರೆ ಬಿತ್ತು. ಅಂದಿನಿಂದ ಆಕೆಯ ಮೇಲೆ ಗಂಡನಿಗೆ ತೃಪ್ತಿಯಿಲ್ಲ. ಅತ್ತಿಗೆ ಮನೆಯಿಂದ ಎಲ್ಲಿಗಾದರೂ ಹೋಗುತ್ತೇನೆಂದು ಹೇಳಿದುದಲ್ಲದೆ ಹೋಗಲಿಲ್ಲ. ಹೋಗುವುದಕ್ಕಾಗಿ ಹಾಗೆ ಹೇಳಿದುದೂ ಅಲ್ಲ ಆಕೆ. ಒಮ್ಮೆ ತಮ್ಮನನ್ನು ಗದರಿಸುವುದಕ್ಕೆ! ನಾದಿನಿಯ ಮಾನವನ್ನು ಭಂಗಮಾಡುವುದಕ್ಕೆ! ನಾದಿನಿಯನ್ನು ತಮ್ಮನಿಂದ ದೂರಮಾಡಿಸಿ ತನ್ನ ದಿಗ್ವಿಜಯವನ್ನು ಹೆಚ್ಚಿಸುವುದಕ್ಕೆ! ತನ್ನ ರಥವನ್ನು ಮುಂದೊತ್ತುವುದಕ್ಕೆ!

ನಾರಾಯಣ ಅಕ್ಕನೆಂದು ಸ್ವಲ್ಪ ಹೆದರಿಬಿಟ್ಟ. ಇದಕ್ಕಾಗಿ ನಾರಾಯಣನನ್ನು ದೂರಿ ಫಲವೇನು? ಎಷ್ಟು ಕೆಟ್ಟ ನಡತೆಯವಳಾದರೂ ಅಕ್ಕನ ಮೇಲೆ ಅಪನಂಬಿಕೆಯನ್ನಿಡುವುದು ಹೇಗೆ? ಅವಳ ಮೇಲೆ ಅಪನಂಬಿಕೆಯನ್ನು ಇಡಲು ಸಾಧ್ಯವಿಲ್ಲ, ಎಂದಾದ ಮೇಲೆ ಯಾರ ಮೇಲೆ ಅಪನಂಬಿಕೆಯಿಡಬೇಕಾದದು? ತನ್ನ ಹೆಂಡತಿಯ ಮೇಲೆ! ನನ್ನ

ಮುದ್ದು ಮಗಳ ಮೇಲೆ! ಶುದ್ಧ ವೈದಿಕವಂಶದಲ್ಲಿ ಹುಟ್ಟಿದ ಈ ಕಲಿಯುಗದ ಸಾವಿತ್ರಿಯ ಮೇಲೆ! ಏನು ಹೇಳಲಿ ತುಂಗಮ್ಮ ನಮ್ಮ ದುರ್ದೈವವನ್ನು! ಆ ದಿನದ ಮಟ್ಟಿಗೆ ಒಮ್ಮೆಗೆ ಬಂದ ವಿಪತ್ತು ದೂರವಾಯಿತು. ಹೇಗೆಂದರೆ ಹೆಂಡತಿಯನ್ನು ನಾರಾಯಣ ಗದರಿಸಿದ; ಹೊಡೆದ; ಎಷ್ಟು ಹೊಡೆದರೂ ಪ್ರಾಣವೇ ಒಂದುವೇಳೆ ಹಾರಿಹೋದರೂ ಮಾನಸ್ಥೆಯಾದ ಹೆಂಗುಸು ಮಾಡದಿದ್ದ ಕೆಲಸವನ್ನು ಮಾಡಿದೆನೆಂದು ಹೇಳಿಯಾಳೇ? ಹೆಂಗುಸಿಗೆ ಪ್ರಾಣ ಹೆಚ್ಚೋ ಮಾನ ಹೆಚ್ಚೋ? ಆ ದಿನ ನಾರಾಯಣ ಹೊಡೆದುದರಲ್ಲಿ ಶಾರದೆಯ ಹೆಣ ಬೀಳುತ್ತಿತ್ತು. ಆದರೆ ಅಷ್ಟೆಲ್ಲ ಆದ ಮೇಲೆ ರಾಕ್ಷಸಿ "ನಾರಾಯಣ! ತಂದ ಹುಡುಗಿಯರನ್ನು ಎಷ್ಟು ಪ್ರೀತಿಯಿಂದ ಸಲಹಿದರೂ ತಂದವರಿಗೆ ಅಪವಾದ ಹೋಗುವುದಿಲ್ಲ. ಸಾಕು; ಇನ್ನು ಹೊಡೆಯಬೇಡ; ನಿನಗೆ ಆಕೆಯ ನಡತೆ ಸರಿಯೆಂದು ತೋರದಿದ್ದರೆ ತವರುಮನೆಗೆ ಕಳುಹಿಸಿಬಿಡು; ಪ್ರಾಣಕ್ಕೆ ಅಪಾಯ ತರುವುದು ಬೇಡ"—ಎಂದಳು. ಶಾರದೆ ಅತ್ತಿಗೆಯ ಮತ್ತು ಗಂಡನ ಕಾಲಿಗೆ ಬಿದ್ದಳು; ಮಹಿಷಮರ್ದಿನಿ ಕೊನೆಗಂತೂ ಪ್ರಸನ್ನಳಾದಳು; "ನಾರಾಯಣ, ಈ ಸಾರಿ ಮಾಫಿಯಿರಲಿ!" ಎಂದಳು. ನಾರಾಯಣನಿಗೆ ಅಕ್ಕನ ಆಜ್ಞೆ ಮೀರಲು ಧೈರ್ಯವೆ ಇಲ್ಲ. ಅದರಲ್ಲಿಯೂ ಒಮ್ಮೆ ತನ್ನ ಹೆಂಡತಿಯ ಮಾತನ್ನು ಕೇಳಿ ಅಕ್ಕನ ಮೇಲೆ ಹಾರಿಬಿದ್ದು ಕೊನೆಗೆ ತನಗೂ ಹೆಂಡತಿಗೂ ಅಪಜಯವಾಗಿರುವಾಗ ಅಕ್ಕ ಹೇಳಿದ ಮಾತು ಪಥ್ಯವಾಗಿರಲಿ; ಅಪಥ್ಯವಾಗಿರಲಿ, ಒಪ್ಪದಿರುವುದು ಹೇಗೆ? ನಾರಾಯಣ ಒಪ್ಪಿದ. ಒಂದು ಸಲ ನನ್ನ ಶಾರದೆಯ ಜೀವವುಳಿಯಿತು. ಆದರೆ ನಾರಾಯಣ ಹೇಳಿದ "ಅಕ್ಕ! ನಾನೆಷ್ಟಾದರೂ ಒಬ್ಬಂಟಿಗ. ಯಾವಾಗಲೂ ತಿರುಗಾಟದಲ್ಲಿರುತ್ತೇನೆ. ಮನೆಯಲ್ಲಿ ಯಾರೂ ಇಲ್ಲ. ಅವಳ ನಡತೆ ಹೀಗಾಯಿತು. ನೀನೆ ಎಲ್ಲದರ ಜಾಗ್ರತೆ ನೋಡಿಕೊಳ್ಳಬೇಕು." ತಮ್ಮನ ಈ ಒಂದು ಮಾತೇ ಸಾಕಾಯಿತು ರುದ್ರಮ್ಮನ ಸಿಟ್ಟನ್ನು ಆರಿಸುವುದಕ್ಕೆ. (ಹೌದು; ನಾರಾಯಣನ ಅಕ್ಕನ ಹೆಸರು ರುದ್ರಮ್ಮ; ಹೇಳುವುದಕ್ಕೆ ಮರೆತ್ತಿದ್ದೆ.) ಬೇರೆ ಹೆಂಗುಸಾಗಿದ್ದರೆ ತಮ್ಮನಿಂದ ಕೆಟ್ಟ ಮಾತುಗಳನ್ನು ಕೇಳಿ ಒಂದು ನಿಮಿಷ ಕುಳಿತುಕೊಳ್ಳುತ್ತಿರಲಿಲ್ಲ ಆ ಮನೆಯಲ್ಲಿ. ಆದರೆ ಲಜ್ಜೆಗೇಡಿಗಳ

ಸ್ವಭಾವವು ಹೀಗೆಯೆ: ರುದ್ರಮ್ಮ ಅಂದಿನಿಂದ ಮನೆಯ ಬೀಗದ ಕೈ ಯನ್ನು ಕೈಯಲ್ಲಿ ಹಿಡಿದುಕೊಂಡು ಯಜಮಾನಿಕೆಯನ್ನು ನೋಡು ತ್ತಿದ್ದಳು. ನನ್ನ ಮಗಳಿಗೆ ಹೇಳಿದ ಕೆಲಸ; ಹಾಕಿದ ಅನ್ನ; ಗಂಡನ ನಿರ್ಬಂಧ; ಅತ್ತಿಗೆಯ ಆರೋಪಣೆ ಯಾವಾಗಲೂ; ನಾನು ಹೇಳಿದ ಕಥೆ ನಡೆದು ಒಂದೇ ಒಂದು ವರ್ಷ ಇದ್ದುದು ನನ್ನ ಹುಡುಗಿ. ಅದು ವರೆಗೂ ಇದೇ ಹಾಡು! ಇದೇ ಗೋಳು! ಗಂಡನಿಗೆ ಸಂದೇಹ ಆಕೆಯಲ್ಲಿ!

ಯಾರೇನು ಮಾಡುವುದು ತುಂಗಮ್ಮ? ದೇವರು ಒಮ್ಮೊಮ್ಮೆ ಬಡವರ ಕೈಗೂ ತಿಂಡಿತಿನಸುಗಳನ್ನು ಕೊಡುತ್ತಾನೆ. ಆದರೆ ಅದನ್ನು ತಿನ್ನಬೇಕಾದರೆ ಭಾಗ್ಯಬೇಕಷ್ಟೆ! ಅದನ್ನು ಕೊಡುವುದಿಲ್ಲ. ಆದುದರಿಂದ ಮಕ್ಕಳು ತಿಂಡಿತಿನಿಸುಗಳನ್ನು ನಮಗೆ ಆಳುಪಿಸಿ ತಿನ್ನುತ್ತಾವಲ್ಲ! ಹಾಗಾಗುತ್ತದೆ ನಮ್ಮ ಪಾಡು!

ಇಷ್ಟು ಕಷ್ಟಗಳಿದ್ದರೂ ಒಂದು ದಿನ ನಮ್ಮ ಶಾರದೆ ತವರುಮನೆಗೆ ಬರಬೇಕೆಂಬ ಆಸೆಯನ್ನು ತೋರಿಸಲಿಲ್ಲ. ಅವರು ಕಳುಹಿಸಲೂ ಇಲ್ಲ ವೆನ್ನಿ; ಅವರಾಗಿ ಕಳುಹಿಸಿದ್ದರೆ ಬರುತ್ತಿದ್ದಳೋ ಏನೊ! ಅದನ್ನೆಣಿಸಿ ಏನು ಪ್ರಯೋಜನ? ಯಜಮಾನರು ಒಮ್ಮೊಮ್ಮೆ ಮಗಳ ಮನೆಗೆ ಹೋಗುವುದಿತ್ತು. ಆಕೆಯ ಮೈಯಲ್ಲಿ ಎದ್ದ ಪೆಟ್ಟಿನ ಗಾಯಗಳನ್ನು ನೋಡಿ ಕಣ್ಣೀರು ಸುರಿಸಿಕೊಂಡು ಬರುವುದೂ ಇತ್ತು. ಆದರೆ ತವರು ಮನೆಗೆ ಬರಲು ನಮ್ಮ ಶಾರದೆ ಎಂದೂ ಒಪ್ಪುತ್ತಿರಲಿಲ್ಲ. ಯಜ ಮಾನರು ಕೇಳುವಾಗ ಕೇಳುವಾಗ "ಇಲ್ಲಪ್ಪ! ಈಗ ಬರುವುದಿಲ್ಲ" ಎನ್ನುತ್ತಿದ್ದಳು. ತವರುಮನೆಗೆ ಬಂದರೇನಾದೀತೆಂದು ಅವಳಿಗೇ ಗೊತ್ತು. ಯಜಮಾನರು ಕೇಳಿದ್ದರೆ ಕರೆದುಕೊಂಡು ಹೋಗಲು ಅಡ್ಡಿಯಿಲ್ಲ ಎಂದು ನಾರಾಯಣನೂ ಹೇಳುತ್ತಿದ್ದ. ಆ ಲಂಕಿಣಿಯೂ ಹೇಳು ತ್ತಿದ್ದಳು. ಆದರೆ ಶಾರದೆಯೇ "ಬರುವುದಿಲ್ಲ" ಎನ್ನುತ್ತಿದ್ದಳು.

ಈ ಮಧ್ಯದಲ್ಲಿ ಶಾರದೆಗೆ ಮುಟ್ಟುಕಟ್ಟಾಯಿತು. ಆರೇಳು ತಿಂಗಳ ಬಸಿರಿಯಾಗಿದ್ದಳು. ಒಂದು ದಿನ ನಾರಾಯಣನೆ ಮನೆಗೆ ಬಂದು— ಮಾವನವರೇ, ಸೀಮಂತ ಗೀಮಂತ ಮಾಡಲು ನಮ್ಮ ಕೈಯಲ್ಲಿ ಕಾಸಿಲ್ಲ; ನೀವು ಬಂದು ಒಮ್ಮೆ ಆಕೆಯನ್ನಿಲ್ಲಿಗೆ ಕರೆದುಕೊಂಡು ಬನ್ನಿ; ನಾಡಿದು ತಂದೆಯ ಶ್ರಾದ್ಧ; ಆ ದಿನ ಬಂದರೆ ಮರುದಿನವೇ ಕಳೆದುಕೊಂಡು ಬರ

ಬಹುದು—ಎಂದಿದ್ದ. ನನ್ನ ಸಂತೋಷಕ್ಕೆ ಕಡಿಮೆಯೇ ಇಲ್ಲ. ಶಾರದೆಯನ್ನು ನೋಡದೇ ವರ್ಷವಾಗಿತ್ತು......ಹಾ. ಇಂದೀಗ ಶಾರದೆ ಹೇಗಿರಬಹುದು? ಗೊನೆಹಾಕಲಿರುವ ಬಾಳೆಯಂತೆ, ಮೈತುಂಬಿ ಕಳೆಯೇರಿ ಶೋಭಿಸುತ್ತಿರಬಹುದು. ಅಂತಹ ನನ್ನ ಶಾರದೆಯನ್ನು ನೋಡುವ ಕಣ್ಣುಗಳು ಪುಣ್ಯಮಾಡಿದ್ದಿರಬೇಕು—ಎಂದು ಮನಸ್ಸಿನಲ್ಲಿ ಎಂದುಕೊಂಡೆ. "ನಾರಾಯಣ! ಹುಡುಗಿಯನ್ನು ಕರೆತರಲು ನಾನೇ ಬರುತ್ತೇನೆ" ಎಂದು ಸಂತೋಷದಿಂದ ನುಡಿದೆ. ಮಂಗಳ ವಾರ್ತೆಯನ್ನು ತಂದಿದ್ದ ಅಳಿಯನಿಗೆ ಸನ್ಮಾನಮಾಡಿ ಕಳುಹಿಕೊಟ್ಟೆ.

ಶ್ರಾದ್ಧದ ದಿನ ಬಂತೆನ್ನಿ; ನಾನು ನಿರೀಕ್ಷಿಸಿದಷ್ಟು ಬೇಗನೆ ಬರಲಿಲ್ಲ. ಹೇಗೆಹೇಗೋ ಮೆಲ್ಲಮೆಲ್ಲನೆ ಬಂತು. ಒಬ್ಬಳು ಕೆಲಸದ ಹೆಂಗುಸನ್ನು ಕರೆದುಕೊಂಡು ನಾನೇ ಶ್ರಾದ್ಧದ ದಿನ ಅಲ್ಲಿಗೆ ಹೋದೆ. ಹೋಗಿ ನೋಡುತ್ತೇನೆ ಹುಡುಗಿಯನ್ನು! ನನಗೆ ಪರಿಚಯವಾದರೂ ಫಕ್ಕನೆ ಆಗಬೇಕೆ? ದೇಹವೆಷ್ಟು ಕಂದಿಹೋದರೂ ನಮ್ಮ ಶಾರದೆಯ ಮುಖ ಬೆಳ್ಳಿ ದೇವರ ಹಾಗೆ ನೋಡು! ಅದರಿಂದಲೆ ಇವಳು ನನ್ನ ಶಾರದೆ ಹೌದು; ಎಂದು ಗುರುತು ಸಿಕ್ಕಿತು. ಶಾರದೆ ನನ್ನನ್ನು ಕಂಡು ಅತ್ತಳು 'ಇನ್ನೂ ಬದುಕ್ಕಿದ್ದೇನೆ ತಾಯಿ' ಎಂದಳು. ನಾನು ಮಕ್ಕಳಂತೆ ಅತ್ತೆ. ಆದರೂ ಹುಡುಗಿಯನ್ನು ಕರೆದುಕೊಂಡು ಬರುವ ಸಂತೋಷದಲ್ಲಿ ಎಲ್ಲ ಮರೆತು ಹೋಯಿತು. ಅವಳ ಮೈತುಂಬ ಗಾಯಗಳಿದ್ದುವು; ಕಣ್ಣು ಹೂತು ಹೋದಂತಿತ್ತು. ದೇಹ ಒಣಗಿದ ಬಾಳೆದಿಂಡಿಗಿಂತಲೂ ಸಪುರವಾಗಿತ್ತು. ಆದರೂ ಮನಸ್ಸಿನೊಳಗೇ ಸಮಾಧಾನಮಾಡಿಕೊಂಡೆ "ಇದುವರೆಗೆ ಪಾಪ! ಶಾರದೆಗೆ ಕಷ್ಟ. ನಾರಾಯಣನೂ ಹುಡುಗನಾಗಿದ್ದ. ಶಾರದೆ ದೇವರ ದಯದಿಂದ ಹೆತ್ತಮೇಲೆ—ನಾರಾಯಣನು ಮಗುವಿನ ತಂದೆಯಾಗುತ್ತಾನೆ. ಮಗುವಿನ ಪ್ರೀತಿಯಿಂದಾದರೂ ತಾಯಿಯನ್ನು ಪ್ರೀತಿಸದಿರುವನೇ? ಶಾರದೆಯ ಕಷ್ಟವನ್ನು ತಪ್ಪಿಸಬೇಕೆಂದೇ ದೇವರು ಆಕೆಗೆ ಈ ವರವನ್ನು ದಯಪಾಲಿಸಿದದು" ಎಂದುಕೊಂಡೆ!

ಪುರೋಹಿತರ ಮನೆಗಳಲ್ಲಿ ಶ್ರಾದ್ಧದ ಊಟ ಯಾವಾಗಲೂ ಬೇಗನೆ. ಅಲ್ಲಿಯೂ ಹಾಗೆ; ಸೂರ್ಯದೇವರು ನಡುನೆತ್ತಿಗೆ ಮುಟ್ಟಬೇಕಾದರೆ ಎಲೆ ಹಾಕಿತ್ತು. ಹೊತ್ತು ಅಂಗಳಕ್ಕಿಳಿಯಬೇಕಾದರೆ ಊಟ ಆಗಿತ್ತು. ನನ

ಗೇಕೋ ತುಂಗಮ್ಮ! ಯಾರಲ್ಲಿ ಮನಸ್ಸು ಎರಕಹೊಯಿದಂತೆ ಇದೆಯೋ ಅವರ ಮನೆಯಲ್ಲಿ ಯಾವ ಕೆಲಸವನ್ನೂ ಮಾಡಬೇಕೆಂದು ತೋರೀತು. ನಾನು ಇಲ್ಲಿ ಕೆಲಸಮಾಡುತ್ತಿರುವುದು ನಿಮಗೇ ಕಾಣುತ್ತಿರುವಾಗ ಅದಕ್ಕೆ ಬೇರೆ ಸಾಕ್ಷಿಯೇಕೆ? ಆದರೆ ಶಾರದೆಯ ಮನೆಯಲ್ಲಿ ಹಾಗಲ್ಲ. ಆ ರುದ್ರಮ್ಮನನ್ನು ಕಂಡರೆ ನನಗಾಗದು. ಅಳಿಯನಲ್ಲಿಯೂ ನನಗಷ್ಟು ಮನಸ್ಸಮಾಧಾನವಿಲ್ಲ. ಅವನು ಅಕ್ಕನ ದಾಸ. ಅಂಥವನಲ್ಲಿ ಆಡುವುದೇನು? ಮನೆಗೆ ಬಂದರೆ ಸಮ್ಮಾನಮಾಡಿ ಕಳುಹಿಸಿದರಾಯಿತು. ಅಳಿಯನಾದುದಕ್ಕೆ ಮರ್ಯಾದೆ ಇಷ್ಟೆ. ಇದಕ್ಕಿಂತ ಹೆಚ್ಚಿನದೇನು ಬೇಕು? ಮನಸ್ಸು ಬೇಸರದಿಂದ ಯಾವುದರಲ್ಲಿಯೂ ಸೇರದೆ ಪ್ರತ್ಯೇಕವಾಗಿದ್ದುದರಿಂದಲೂ, ಊಟಮಾಡಿ ಆಯಾಸವಾದುದರಿಂದಲೂ, ಶಾರದೆಯ ಕೈಯಲ್ಲಿ ಒಂದು ಚಾಪೆಯನ್ನು ಕೇಳಿ ನಾನು ಸ್ವಲ್ಪ ವಿಶ್ರಾಂತಿ ತೆಗೆದುಕೊಂಡೆ.

ನಾನು ಮಲಗಿ ಸ್ವಲ್ಪ ಸಮಯವಾದ ಮೇಲೆ, ಶಾರದೆಯೂ ರುದ್ರಮ್ಮನೂ ಊಟ ತೀರಿಸಿಕೊಂಡು ಅಡಿಗೆಮನೆಯನ್ನು ಪ್ರವೇಶಿಸಿದರೆಂದು ತೋರುತ್ತದೆ. ಅಡಿಗೆ ಮನೆಯಲ್ಲಿ ಕೆಲಸಗಳೆಲ್ಲ ಮುಗಿದಿರಲಿಲ್ಲ. ಒಲೆಯಲ್ಲಿ ಒಂದೆರಡು ಬೆಂಕಿಕೊಳ್ಳಿಗಳಿದ್ದುವು. ಬಳಿಯಲ್ಲಿಯೆ ಉರುಳಿಯೊಂದಿತ್ತು. ಅಲ್ಲೆ ಅದ್ದಿಟ್ಟುಮಾಡುವ ಹಿಟ್ಟೂ ಇತ್ತು. ರುದ್ರಮ್ಮನ ದೃಷ್ಟಿ ಅದರ ಮೇಲೆ ಬಿತ್ತು. "ಏನು ಶಾರದೆ ಇದು?" ಎಂದು ರುದ್ರಮ್ಮ ದಟ್ಟಿಸುವ ಸ್ವರದಿಂದ ಕೇಳಿದಳು. "ಏನೂ ಇಲ್ಲ ಅತ್ತಿಗೆ! ಅದ್ದಿಟ್ಟುಮಾಡಿ ತಿನ್ನಬೇಕೆಂಬ ಬಯಕೆಯಾಯಿತು" ಎಂದು ನಡುಗುವ ಸ್ವರದಲ್ಲಿ ನನ್ನ ಬಸಿರಿ ಮಗಳು ಉತ್ತರಕೊಟ್ಟಳು. "ಇದು ಬಡವರ ಮನೆ ತಿಳಿಯಿತೇ! ನಿನ್ನ ಅದ್ದಿಟ್ಟು ತಿನ್ನುವ ಬಯಕೆಯನ್ನು ತೀರಿಸುವಾಗ ನಮ್ಮ ಮನೆ ಅಡಿಮೇಲಾದೀತು!" ಎಂದು ಗರ್ಜನೆ ಕೇಳಿತು. "ತಪ್ಪಾಯಿತು; ಹೇಗೂ ಇಷ್ಟು ಅಕ್ಕಿಯನ್ನು ಹಿಟ್ಟುಮಾಡಿ ಆಯಿತು. ಅದನ್ನು ಹೊಯಿದುಬಿಡುತ್ತೇನೆ" ಎಂದು ಶಾರದೆ ನುಡಿದಳು.

ಇಷ್ಟಾಗುವಾಗ, ನಾನೊಬ್ಬಳು ಬಂದಿದ್ದೆನೆಂಬುದನ್ನು ತಿಳಿದು, ನನ್ನ ಮುಂದೆ ಮಗಳ ಸಹಸ್ರನಾಮವನ್ನು ಮಾಡಿಸಬೇಕೆಂಬ ಸದುದ್ದೇಶದಿಂದಲೋ ಏನೋ, ರುದ್ರಮ್ಮ, ಕೋರ್ಟಿನ ಮುಂದೆ ನಿಂತು ನಂಬ್ರ

ಮಾಡುವ ವಕೀಲರಂತೆ, ಶಾರದೆಯ ಮೇಲೆ ಹೀಗೆ ಬೈಗಳ ಸುರಿಮಳೆಯನ್ನು ಸುರಿಸಿದಳು. "ದೊಡ್ಡವರ ಹುಡುಗಿಯನ್ನು ತರಬೇಡವೆಂದು ತಂದೆಯ ಕಾಲು ಮಾತ್ರ ಹಿಡಿದಿರಲಿಲ್ಲ. ಆದರೂ ತಂದರು. ಅದರ ಫಲ ಇದು. ನಾರಾಯಣನು ಮನೆಮನೆಗೆ ಹೋಗಿ ಕಡಿ ಅಕ್ಕಿ, ಕೊಳೆತ ತೆಂಗಿನಕಾಯಿಗಳನ್ನು ಬಹುಕಷ್ಟದಿಂದ ತಂದುಹಾಕಿದರೆ ಅದೆಲ್ಲಾ ಇವಳೊಬ್ಬಳ ಅದ್ದಿಟ್ಟಿಗೆ ಸಾಕಾಗುವುದಿಲ್ಲ. ತನ್ನ ಹೆಂಡತಿಯೆಂದರೆ ಗುಣದಲ್ಲಿ ಸೀತೆ, ಸೌಂದರ್ಯದಲ್ಲಿ ರಂಭೆ, ಎಂದು ಭಾವಿಸುತ್ತಾನೆ ಈ ಹೆಂಡತಿಯ ದಾಸ. ಅವಳು ಬಹಳ ಮಾನಸ್ಥೆ! ಕುಲೀನರ ಮಗಳು. ನಮಗೆ ಮಾತ್ರ ಕುಲವಿಲ್ಲ. ಆಕೆಯ ತಂದೆ ದೊಡ್ಡ ಶಾಸ್ತ್ರಿಗಳು! ಶಾಸ್ತ್ರಿಗಳ ಮಗಳು ಅನ್ಯಾಯ ಮಾಡಿದರೆ ದೂರು ಕೇಳಬೇಕು ನನ್ನಂಥ ಪಾಪಿಗಳು! ಒಂದು ಮಾತು ಹೇಳಿ ಎರಡನೆಯ ಮಾತನ್ನು ಹೇಳಬೇಕಾದರೆ ಕಣ್ಣೀರು! ಈ ಕಣ್ಣೀರು ಎಷ್ಟು ಬೇಗನೇ ಬರುವುದೋ ಅಷ್ಟೇ ಬೇಗನೆ–ನಾನು ಹೇಳುವುದಿಲ್ಲ–ಇನ್ನೊಂದು ಬುದ್ಧಿಯೂ ಬರುತ್ತದೆ. ಸಣ್ಣ ಪ್ರಾಯದಲ್ಲಿ ಬೀದಿಬಸವಿಗಳಂತೆ ತಿರುಗಿದವುಗಳಿಗೆ ಏನು ಬುದ್ಧಿ ಬಂದೀತು? ಹುಡುಗಿಯ ತಂದೆ, ಎರಡು ಅಂಗೈಯಗಲದ ಷಟ್ಪುಚ್ಛ ಹಾಕುತ್ತಾನೆ. ಬಾವಿ ಹಗ್ಗದಷ್ಟು ತೋರದ ಯಜ್ಞೋಪವೀತಹಾಕುತ್ತಾನೆ. ಮೋರೆಯಲ್ಲಿ ಸ್ಥಳವಿರುವಷ್ಟು ಅಕ್ಷತೆ ಹಾಕುತ್ತಾನೆ—ಎಂದು ಗುಣಸ್ವಭಾವಗಳನ್ನು ನೋಡದೆ ಹುಡುಗಿಯನ್ನು ತಂದರೆ ಆಗುವ ಅವಸ್ಥೆಯಿದು! ಕೈಹಿಡಿದವನಿಗೊಂದು ಹೆಸರು. ಅವನ ಬಂಧುಬಳಗಕ್ಕೊಂದು ಹೆಸರು............"ಹೀಗೆಯೇ ಆಕೆಯ ಮಾತು 'ಸಟಸಟ' ಎಂದು ಕಲ್ಲುರುಳಿದಂತೆ ಬೀಳುತ್ತಿತ್ತು. ರುದ್ರಮ್ಮ ಹೀಗೆಲ್ಲವನ್ನೂ ಒಂದೇ ಸಲ ಹೇಳಿ ಮುಗಿಸಿಬಿಟ್ಟುದೇಕೆಂದು ನನಗೆ ತಿಳಿಯಲಿಲ್ಲ. ಅಥವಾ ಎಲ್ಲವನ್ನೂ ನನಗೆ ತಿಳಿಸುವುದಕ್ಕೆ ಹೇಳಿದುದಾಗಿರಬಹುದು. ಬರಿಯ ಅದ್ದಿಟ್ಟು ಒಂದರ ವಿಷಯವಾಗಿ ಬೈಯಬೇಕಾಗಿದ್ದರೆ ಇಷ್ಟೆಲ್ಲಾ ಪುರಾಣವನ್ನು ಹೇಳಬೇಕಾಗಿರಲಿಲ್ಲ. ಅದ್ದಿಟ್ಟೊಂದನ್ನು ನೆವ ಮಾಡಿ ನನ್ನ ಮಗಳ ನಡತೆ ಹಾಳು ಎಂದು ನನ್ನ ಮುಂದೆಯೇ ರುಜುಪಡಿಸುವುದಕ್ಕಾಗಿ, ಆ ಮೂಲಕ ತನ್ನ ಗುಣಕ್ಕೆ ಒಳ್ಳೆಯ ಬಣ್ಣವನ್ನು ಬಳಿದು ತಾನು ದೊಡ್ಡ ಸನ್ಯಾಸಿನಿಯೆಂದು ತೋರಿಸುವುದಕ್ಕಾಗಿ, ಅವಳು ಹೀಗೆ ಬೈದುದಿರಬೇಕು. ಹೇಗೂ ಇರಲಿ; ನನ್ನಿಂದೇನು ಮಾಡಲಾಗುತ್ತದೆ?

ಗಂಡನ ಮನೆ; ಗಂಡನಿದ್ದಾನೆ! "ಅಯ್ಯೋ, ನಾನೇಕೆ ಇಲ್ಲಿಗೆ ಬಂದೆ?" ಎಂದುಕೊಂಡು ಮಲಗಿದ್ದಲ್ಲೇ ಅತ್ತೆ. ಅತ್ತಲ್ಲೇ ಮಲಗಿದೆ.

ಇನ್ನು ಮುಂದಿನ ಕಥೆಯನ್ನು ಕೇಳುವಾಗ ತುಂಗಮ್ಮ, ರೋಮ ರೋಮಗಳೂ ನೆಟ್ಟಗೆ ನಿಲ್ಲುತ್ತವೆ. ಇಂತಹ ಕಥೆಯನ್ನು ಕೇಳಿ ರಾತ್ರಿ ಮಲಗಿದರೆ ಸ್ವಪ್ನದಲ್ಲಿ ಭೂತಪಿಶಾಚಿಗಳ ದರ್ಶನವಾದೀತು. ಪ್ರಾಣ ಹೋಗುವಷ್ಟು ಭಯವಾದೀತು. ಲೋಕದಲ್ಲಿ ಹುಟ್ಟಿ ಮನುಷ್ಯರೆನಿಸಿ ಕೊಳ್ಳುವವರಾರೂ ಇಂತಹ ಕೆಲಸಮಾಡಲಾರರು. ಕಾಡಿನ ಜಂತುಗಳಾ ದರೂ ಆರ್ತ ಪ್ರಾಣಿಗಳನ್ನು ಕನಿಕರದಿಂದ ನೋಡುತ್ತವೆ. ಹೀಗೆ ಮಾಡು ವವರಿಗೆ ಯಾವ ನರಕವನ್ನು ದೇವರು ಕಟ್ಟಿಸಿ ಇಟ್ಟಿದ್ದಾನೋ? ನಾನು ಇದನ್ನೆಲ್ಲಾ ಕಂಡವಳು. ಕೇಳುವ ನಿನಗೇ ವ್ಯಸನವಾಗುತ್ತದೆ ಎಂದ ಮೇಲೆ ಕಂಡ ನನಗೇನಾಗಿರಬೇಕು? ಪ್ರಾಣಹೋಗದೆ ನಾನು ಆಗ ಹೇಗೆ ಬದುಕಿದೆನೋ ತಿಳಿಯದು. ಅದರಲ್ಲಿಯೂ ಹೆತ್ತ ತಾಯಿ. ಇತರರಿಗೆ ನನ್ನ ಮಗಳು ಕಸಕಡ್ಡಿಯಂತೆ ಒಡೆದು ಬಿಸಾಡುವ ವಸ್ತುವಾಗಿರಬಹುದು. ನನಗಾದರೆ ಹಾಗಲ್ಲ ತುಂಗಮ್ಮ. ಹತ್ತು ತಿಂಗಳು ಈ ಹೊಟ್ಟೆಯಲ್ಲೇ ಹೊತ್ತಿದ್ದೇನೆ. ಹದಿಮೂರು ವರ್ಷ ಈ ಕೈಗಳಿಂದಲೇ ಸಾಕಿದ್ದೇನೆ. ಒಂದು ಕೆಟ್ಟಮಾತನ್ನು ಕೇಳಿದವಳಲ್ಲ ನನ್ನ ಮಗಳು. ಅಂತಹ ಬಡ ಕೂಸಿಗೆ ದೇವರು ಎಂಥ ಗಂಡನನ್ನು ಕೊಟ್ಟ! ಎಂಥ ಮನೆಯನ್ನು ಕೊಟ್ಟ! ಹೇಳಿಬಿಡುತ್ತೇನೆ. ಉಳಿದ ಕಥೆಯನ್ನು ಬೇಗನೆ ಮುಗಿಸಿಬಿಡುತ್ತೇನೆ.

ರುದ್ರಮ್ಮ ಹೀಗೆ ಬಾಯಿಗೆ ಬಂದಂತಹ ಕೆಟ್ಟ ಮಾತುಗಳನ್ನು ಆಡಿದ್ದೇ ತಡ; ಎಲ್ಲಿಯೋ ಇದ್ದ ನಾರಾಯಣ, ಬೇನೆಯಾದ ಸರ್ಪದಂತೆ ಎಲ್ಲಿಂದಲೋ ಓಡಿಬಂದು ತನ್ನ ಮುಷ್ಟಿಯಿಂದ ಬಲವಾದ ಏಟೊಂದನ್ನು ಕೊಟ್ಟ. ಅದರ ಶಬ್ದದ ನೆನಪಾದರೆ ಈಗಲೂ ಮೈ ಝುಮ್ಮೆನ್ನುತ್ತದೆ. ಎಂತಹ ಶಬ್ದವೆಂದು ಭಾವಿಸಿರುವೆ? ಅಯ್ಯೊ! ಒಂದು ದೊಡ್ಡ ಬಾಳೆಗೆ ದೊಡ್ಡ ದೊಣ್ಣೆಯಿಂದ ಬಲವಾಗಿ ಹೊಡೆದರೆ ಎಂತಹ ಶಬ್ದವಾದೀತೋ ಅಂತಹ ಶಬ್ದ. 'ಅಯ್ಯೋ ನಾನು ಸತ್ತೆ!' ಎಂಬ ಕರ್ಣಕಠೋರ ಶಬ್ದ ಕೇಳಿಬಂತು. ಅನಂತರ ದೊಪ್ಪನೆ ಬಿದ್ದ ಶಬ್ದ. ಬಿದ್ದುದು ಯಾರು? ನನ್ನ ಮಗಳು! ಹದಿನೆಂಟು ವರ್ಷದಲ್ಲೆ ಸಾಯಬೇಕೆಂದು ಬ್ರಹ್ಮನ ಅಪ್ಪಣೆ ಪಡೆದ ನನ್ನ ಮಗಳು! ನಾನು ಹತ್ತು ತಿಂಗಳು ಹೊಟ್ಟೆಯೊಳಗೆ

ಹೊತ್ತು ಹದಿಮೂರು ವರ್ಷ ಸಾಕಿದ ನನ್ನ ಮುದ್ದು ಮಗಳು! ನನ್ನ ಪ್ರಾಣದ ಮಗಳು! ನನ್ನ ಸರ್ವಸ್ವವಾಗಿದ್ದ ಮಗಳು!

ನಾನು ಮಲಗಿದಲ್ಲಿಂದ ಎದ್ದು ಥಟ್ಟನೆ ಅಲ್ಲಿಗೆ ಓಡುತ್ತೇನೆ. ನೋಡುವುದೇನನ್ನು? ತುಂಬಿದ ಗರ್ಭದ ಆ ಹುಡುಗಿ, ನೆಲದಲ್ಲಿ ಬಿದ್ದಿದ್ದಾಳೆ. ನಾರಾಯಣ ಕಾಲಿನಿಂದ ಒದೆಯುತ್ತಾನೆ. ರುದ್ರಮ್ಮ ಕಾಣುವುದಿಲ್ಲ. ಅಯ್ಯೋ ನನ್ನ ಮಗಳನ್ನು ಕೊಲ್ಲುವೆಯಾ ಎಂದು ಅಳಿಯನ ಕಾಲಿಗೆ ಬಿದ್ದೆ! ಆತನು ಏನು ಭಾಷಿವಿಸಿದ್ದನೋ ಗೊತ್ತಿಲ್ಲ. ಅಲ್ಲಿಂದೆದ್ದು ಹೋದ. ಹೆಂಡತಿ ಸತ್ತಳೋ ಬದುಕಿದಳೋ ನೋಡಲಿಲ್ಲ. ನನ್ನ ಕರುಳಲ್ಲವೆ? ನಾನು ಆಕೆಯನ್ನು ಹಿಡಿದೆತ್ತಿದೆ; ಮುಖಕ್ಕೆ ನೀರು ಚಿಮುಕಿಸಿದೆ. ಮುಖದಲ್ಲಿ ಜೀವಕಳೆಯೇ ಇಲ್ಲದಂತಿತ್ತು. ಆದರೂ ಅಯ್ಯೋ! ಅಯ್ಯೋ! ಎಂದು ನರಳುತ್ತಿದ್ದಳು. ನೋಡು, ಇಷ್ಟು ಪ್ರೀತಿಯಿಂದ, ಇಷ್ಟು ಕೊಂಡಾಟದಿಂದ ಸಾಕಿಸಲಹಿದ ಹುಡುಗಿಯನ್ನು, ಯಾರೋ ಒಬ್ಬ ಪಟ್ಟಿಂಗನಿಗೆ ಹೌದು, ಹಾಗೆಯೇ ಹೇಳಬೇಕು; ಇಲ್ಲದಿದ್ದರೆ ಹೀಗೆ ರಾಕ್ಷಸರಂತೆ ವರ್ತಿಸುತ್ತಿದ್ದ ಕೈ ಹಿಡಿದ ಗಂಡ—ಚೆಂಡಿನಂತೆ ಹೊಡೆಯುವುದಕ್ಕೆ ಕೊಟ್ಟೆ. ಹೆಂಗುಸಾಗಿ ಹುಟ್ಟಿದವಳ ಅವಸ್ಥೆ ಹೀಗೆಯೆ ಅಮ್ಮ. ಹಣವಿರುವವರ ಪಾಡು ಬೇರೆ! ಹೆಂಡತಿಯ ತಾಯ್ತಂದೆಗಳಿಂದ ಹಣ ಸುಲಿಯಬಹುದೆಂದು, ಕರೆವ ದನವನ್ನು ಸಾಕುವಂತೆ, ಹುಡುಗಿಯನ್ನು ಸಾಕುತ್ತಾರೆ. ಇಲ್ಲವಾದರೆ ಇದೇ ಗತಿ ಹುಡುಗಿಗೆ! ಗಂಡನೆನಿಸಿ ಎರಡು ದಿನವಾದರೂ ಸುಖದಿಂದ ಸಂಸಾರಮಾಡದೆ, ಬೈಗಳಿಗೂ, ಪೆಟ್ಟುಗಳಿಗೂ, ಒದೆತಕ್ಕೂ ಸಿಕ್ಕಿ ಪ್ರಾಣಬಿಡುವುದೊಂದೇ ಗತಿ ಹುಡುಗಿಗೆ—ಇಷ್ಟು ಹೇಳುವಾಗ ಪಾರ್ತಮ್ಮ ಗೊಳ್ಳೆಂದು ಅತ್ತಳು.

ಇನ್ನೇನು ಹೇಳುವುದು ತುಂಗಮ್ಮ! ಸಾಯಲು ಬಿದ್ದವರಿಗೆ ಔಷಧೋಪಚಾರವಾಗದಿರುವುದೇ? ಒದೆದು ಉರುಳಿಸಿದ ನಾರಾಯಣನೇ, ಅದಕ್ಕೆಲ್ಲ ಕಾರಣಭೂತಳಾದ ರುದ್ರಮ್ಮನೆ ಬಂದು ಬೇಕಾದ ಉಪಚಾರ ಮಾಡಿದರು. "ನೆಲಕ್ಕೆ ಬಿದ್ದು ಪೆಟ್ಟಾಗಿದೆ; ಬಹಳ ಪೆಟ್ಟಾಗಿದೆ" ಎಂದು ತಮ್ಮ ತಪ್ಪನ್ನು ಮರೆಯಿಸುವುದಕ್ಕೆ ಪ್ರಯತ್ನಪಟ್ಟರು. ನಾನು ಆಕೆಯ ಕೊನೆಯ ಸೇವೆಯನ್ನು ಕೂಡಿದಷ್ಟು ಮಾಡಿದೆ. ಬಹು ಸಂತೋಷದಿಂದ ಧಾರೆಯೆರೆದು ಕೊಟ್ಟ ಮಗಳನ್ನು ಪರಲೋಕಕ್ಕೆ ಕಳುಹಿಸಿಕೊಡು

ವಾಗಲೂ ಇದ್ದೆ. ಊರಲ್ಲಿ ಒಬ್ಬರು ಪಂಡಿತರು ಇದ್ದರು. ಅವರೇನೋ ಔಷಧೋಪಚಾರಮಾಡಿದರು. ಬಸಿರಿಯಲ್ಲವೇ? ದೇವರಂತೆ ಪೂಜಿಸ ಬೇಕಾದ ಪ್ರಾಣಿಯದು. ಇಂತಹ ಹಿಂಸೆಯನ್ನು ಸಹಿಸಿ ಬದುಕುವುದಾ ದರೂ ಹೇಗೆ? ಆ ದಿನವೇ ಆಕೆಗೆ ಪ್ರಸವವೇದನೆ. ಮೂರನೆಯ ದಿನ ಕಾಷ್ಠದ ಹಾಸಿಗೆಯನ್ನೇರಿದಳು ನನ್ನ ಮುದ್ದು ಶಾರದೆ. ಆಕೆಗೆ ಇನ್ನೊಂದು ಜನ್ಮದಲ್ಲಿಯಾದರೂ ಒಳ್ಳೆಯ ಗಂಡ ದೊರೆಯಲಿ ಎಂದಿಷ್ಟೆ ನಾನು ಪ್ರಾರ್ಥಿಸುವುದು. ಮನುಷ್ಯರು ಇದಕ್ಕಿಂತ ಹೆಚ್ಚೇನು ಮಾಡ ಬಲ್ಲರು? ಸಾವೂ ಬದುಕೂ ದೈವೇಚ್ಛೆ. ಅದರಲ್ಲಿಯೂ ಇಂತಹ ಸಾವನ್ನು ಪಡೆಯಬೇಕಾಗಿದ್ದರೆ ಆ ಕೂಸು ಪೂರ್ವಜನ್ಮದಲ್ಲಿ ಎಂತಹ ಪಾಪ ಮಾಡಿದ್ದಾಳೋ! ನಾವೆಂತಹ ಪಾಪಮಾಡಿದ್ದೇವೋ! ಪಾಪಪುಣ್ಯಗಳ ಲೆಕ್ಕಗಳನ್ನು ಬರೆದಿಡುವ ಆ ಪರಮಾತ್ಮನಿಗೇ ಗೊತ್ತು. ಸ್ಥಿತಿ ಹೀಗಾ ದರೂ ನಾವು ಶಾರದೆಯ ಮರಣದ ಕಾರಣವನ್ನಾರಿಗೂ ತಿಳಿಸಲಿಲ್ಲ. ಸತ್ತವಳು ಸತ್ತೇ ಹೋದಳು. ಯಾರಲ್ಲಿಯೂ ಹೇಳದೆ ಕೇಳದೆ ನಡೆದೇ ಬಿಟ್ಟಳು. ಸಾಯುವ ಪ್ರಾಯದ ತಾಯಿತಂದೆಗಳಿದ್ದರೂ ಅವರನ್ನು ಬಿಟ್ಟು ಓಡಿಯೇ ಬಿಟ್ಟಳು. ಒಟ್ಟಿನಲ್ಲಿ ಸಾಯುವವರು ಪುಣ್ಯವಂತರು. ಅದರಲ್ಲಿಯೂ ಸುಮಂಗಲೆಯಾಗಿ ಸಾಯುವುದು ಎಷ್ಟೋ ಪುಣ್ಯ. ಹಾಗೆಯೇ ಆಯಿತು ನಮಗೆ. ಆದರೆ ನಾವಿನ್ನೂ ಸಾಯದೆ ಅವಳ ಕಥೆ ಯನ್ನು ಹೇಳುವುದಕ್ಕೆ ಉಳಿದಿದ್ದೇವೆ ಭೂಭಾರವಾಗಿ.

ಪಾರ್ತಮ್ಮನ ಮಾತನ್ನು ಕೇಳಿ ತುಂಗಮ್ಮನೂ ಅತ್ತಳು. ತನ್ನ ಕಷ್ಟವನ್ನು ಕೇಳಿ ಅಳುವವರಿದ್ದಾರಲ್ಲ ಎಂದು ಪಾರ್ತಮ್ಮ ಮತ್ತೂ ಅತ್ತಳು. ಅಷ್ಟರಲ್ಲಿ ಮಾಡಬೇಕಾಗಿದ್ದ ಅದ್ದಿಟ್ಟು ಮುಗಿದುಹೋಗಿ, ಕಾದ ಎಣ್ಣೆಗೆ ಬೆಂಕಿ ಹತ್ತಿದ್ದಿತು. ಧಗಧಗನೆ ಉರಿಯುತ್ತಿದ್ದ ಬೆಂಕಿಯ ಶಬ್ದ ಕೇಳಿ ಅವರ ದುಃಖವು ಫಕ್ಕನೆ ನಿಂತುಹೋಯಿತು.

ಅದ್ದಿಟ್ಟಿನ ಕುಡಿಕೆಗಳೆಲ್ಲ ತುಂಬಿಹೋದುವು. ಅಷ್ಟಾಗುವುದರ ಒಳಗೆ ಪಾರ್ತಮ್ಮನ ಹೃದಯದಲ್ಲಿ ಅಡಗಿಕೊಂಡಿದ್ದು ಅದ್ದಿಟ್ಟನ್ನು ಕಂಡೊಡನೆ ಉಕ್ಕಿ ಬಂದ ದುಃಖರಸವೆಲ್ಲ ಒಮ್ಮೆ ಸೋರಿಯೂ ಹೋಯಿತು! ಆ ದಿನದ ಶ್ರಾದ್ಧದ ಕಾರ್ಯಭಾಗವಾದ ಅದ್ದಿಟ್ಟಿನ ಕೆಲ ಸವೂ ಯಥಾಸಾಂಗವಾಗಿಯೇ ಜರುಗಿತು!

# ಅಪರೂಪದರ್ಶನ

ಮಂಗಳೂರಲ್ಲಿ ಜೂನ್ ತಿಂಗಳ ಜಡಿಮಳೆ ಆರಂಭವಾಗಿತ್ತು. ಶೀತವಾದ ಬಿರುಸಾದ ಗಾಳಿಯ ಸುಳಿದಾಟಕ್ಕೆ ಕೊನೆಯಿರಲಿಲ್ಲ. ನನ್ನ ಕೋಣೆಯ ಬಾಗಿಲು ಹಿಂದಕ್ಕೂ ಮುಂದಕ್ಕೂ ತೊನೆಯುತ್ತಾ ಸೋವಾರಿಯ ಆಕಳಿಕೆಯನ್ನು ನೆನಪಿಗೆ ತರುತ್ತಿತ್ತು. ಹೊರಗೆಲ್ಲ ತಂಡಿ; ಒಳಗೆಲ್ಲ ಒದ್ದೆ. ಹೀಗಾಗಿ ಉತ್ಸಾಹವನ್ನು ಸ್ವಲ್ಪ ಬಿಸಿಮಾಡುವುದಕ್ಕೆ ಜೇಬಿನಿಂದೊಂದು ಸಿಗರೇಟನ್ನು ತೆಗೆದು ಸೇದುತ್ತಾ ಮಲಗುವ ಕುರ್ಚಿಯ ಮೇಲೊರಗಿ, ಸೂಸುತ್ತಿದ್ದ ಹೊಗೆಯು ಆಕಾಶಕ್ಕೇರುವ ನೋಟವನ್ನು ನೋಡುತ್ತಿದ್ದೆ. ಬೇಕೋ ಬೇಡವೊ ಎಂಬಂತೆ ನಿದ್ದೆಯು ಕಣ್ಣೆವೆಯ ಮೇಲೆ ಕುಳಿತು ರೆಪ್ಪೆಯನ್ನೊತ್ತಿ ಮುಚ್ಚುತ್ತಲೂ ತೆರೆಯುತ್ತಲೂ ಇತ್ತು. ಇನ್ನೊಂದು ನಿಮಿಷದಲ್ಲಿ ನಿದ್ರೆಯ ವಶವಾಗುತ್ತಿದ್ದೆ. ಆದರೆ ಈ ಬಾರಿ ಬಾಗಿಲ ಶಬ್ದವು ಮೊದಲಿಗಿಂತ ಕರ್ಕಶವಾಗಿ ಕಿವಿಯನ್ನು ಹೊಡೆದ ಕಾರಣ ನಿದ್ದೆ ಓಡಿಹೋಗಿ ಕಣ್ಣು ತೆರೆದು ಕುರ್ಚಿಯಿಂದ ಎದ್ದೆ. ಬಾಗಿಲನ್ನು ಬದಿಗೊತ್ತಿ ನೂತನ ವ್ಯಕ್ತಿಯೊಂದು ನನ್ನಿದಿರಲ್ಲಿ ನಿಂತಿತ್ತು.

ಆಗಂತುಕನು ಯಾರೆಂದು ತಿಳಿಯಲಿಲ್ಲ. ಆ ಅಭಿಪ್ರಾಯವನ್ನು ನನ್ನ ಮುಖವು ಪ್ರಕಟಿಸಿದುದರಿಂದಲೊ ಏನೊ, ಅವನು, "ತಮ್ಮ ದರ್ಶನ ಅಪರೂಪ ಸ್ವಾಮಿ!" ಎಂದನು.

ಆಗಂತುಕನಿಗೆ ನನ್ನ ದರ್ಶನವು ಅಪರೂಪವಾಗಿಯಾದರೂ ಆಗುತ್ತಿದ್ದುದು ಹೇಗೆ? ಏಕೆ? ಎಂದು ನನಗೆ ಗೊತ್ತಿರಲಿಲ್ಲ. ಆದರೂ ಆತ ಹಾಗೆ ಹೇಳಿದುದರಿಂದ "ಪರಿಚಯ"ವನ್ನು ಅಲ್ಲಗಳೆಯುವ ಧೈರ್ಯ ನನಗಾಗಲಿಲ್ಲ.

"ನೋಡಿ ಸ್ವಾಮಿ! ಆ ಹೊತ್ತು ನೀವೊಂದು ಭಾಷಣಕೊಟ್ಟಿದ್ದಿರಲ್ಲ..... ಆಗ ನಾನು ಅಲ್ಲಿದ್ದೆ.... ಭಾಷಣವೆಂದರೆ ಭಾಷಣ ಅದು!" ಎಂದು ಮಾತಿನ ರಭಸವನ್ನು ಹೆಚ್ಚಿಸುವುದರಲ್ಲಿದ್ದಾಗ, ''ಆಗಿರಬಹುದು'' ಎಂಬ ಆಲಸ್ಯಪೂರ್ಣವಾದ ಸಮ್ಮತಿಕೊಟ್ಟೆ.

ಆತನ ಕಪ್ಪು ಮುಖದ ಮಧ್ಯದಲ್ಲಿ ದಿಕ್ಕು ದಿಕ್ಕಿಗೆ ಓಡಾಡುತ್ತಿದ್ದ

ಮೆಳ್ಳೆಗಣ್ಣುಗಳು ಶುಭಸೂಚಕವಾಗಿರಲಿಲ್ಲ. ಗ್ರಾಮ್ಯಭಾಷೆಯನ್ನು ಪ್ರಯೋಗಿಸಬಹುದಾದರೆ, ಅದೇನೋ "ಪಿಕಲಾಟ" ಮಾಡುವುದಕ್ಕೆ ಯಾವಾಗಲೂ ಉತ್ಸುಕನಾಗಿರುವ ವ್ಯಕ್ತಿ ಎಂದು ನನ್ನ ಮನಸ್ಸು ಸಾರಿ ಹೇಳಿತು. ಹೆಚ್ಚಿನ ಚಿಂತನೆಗೆ ಎಡೆಕೊಡುವ ಜನ ಅದಾಗಿರಲಿಲ್ಲ. "ನಿಮ್ಮದೊಂದು ಕಥೆಯನ್ನೋದಿದ್ದೇನೆ. ಯಾವ ಪತ್ರಿಕೆಯಲ್ಲಿಯೋ ಮರೆತುಬಿಟ್ಟೆ. ಎದೆ ಬಿಚ್ಚಿ ಹೇಳುತ್ತೇನೆ ಭಟ್ಟರೇ! ಅದನ್ನೋದಿದ ಮೇಲೆ ನನ್ನ ಮನಸ್ಸು ಏನೇನೋ ಆಯಿತು" ಎಂದು ಹೇಳಿದನು. ನನ್ನ ಭಾಷಣ ಕೇಳಿದ್ದಾನೆ; ಕತೆ ಓದಿದ್ದಾನೆ! "ಹೂಂ" ಎಂದಾದರೂ ಉತ್ತರಕೊಡಬೇಡವೆ? ಉತ್ತರವನ್ನೇನೋ ಹೂಂಕಾರ ರೂಪದಲ್ಲಿ ಕೊಟ್ಟೆ. ಆದರೆ ಆತನ ಮುಖಲಕ್ಷಣವು ಅಶುಭವಾಗಿಯೇ ತೋರಿತು. ನನ್ನ ಒಲವನ್ನು ಸಂಪಾದಿಸುವ ಬಲೆಗಳು—ಆ ಕಥೆಯ, ಭಾಷಣದ, ಮಾತು ಗಳು; ಎಂದು ನನಗೆ ತೋರಿತು. ನಾನು ಕದಲಲಿಲ್ಲ. ಮುಖಭಾವ ದಲ್ಲಿ ಪರಿವರ್ತನೆಯನ್ನು ಕಾಣಿಸಲಿಲ್ಲ. ಇಷ್ಟರಲ್ಲಿ ನನ್ನ ಬಳಿಯಲ್ಲಿಯೇ ಇದ್ದ ಕುರ್ಚಿಗೆ ಆಗಂತುಕನನ್ನು ಹೊರುವ ದೌರ್ಭಾಗ್ಯವಾಗಿತ್ತು; ಇದನ್ನು ಕಣ್ಣಾರೆ ಕಂಡೆ.

ಅವನ ದೃಷ್ಟಿ—ಪ್ರಪಂಚವನ್ನು ನೇರಾಗಿ ನೋಡಲಾರದ ವಕ್ರ ದೃಷ್ಟಿ, ನಾಲ್ಕಾರು ಬಾರಿ ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಿಗೂ ಓಡಾಡಿತು. ನನ್ನನ್ನು ಹೇಗೆ ಬಗಲಿಗೆ ಸೇರಿಸಬಹುದೆಂದು ತಿಳಿ ಯಿತೋ ಏನೋ! ಪಕ್ಕನೆ ಒಂದು ನಗುವನ್ನುಕ್ಕಿಸಿದ. "ಎಂಥ ಭಾವ ಗಳಯ್ಯ! ಸತ್ತರು ಹಳೆಯ ಕವಿಗಳು!" ಎಂದು, ನಾನು ಬರೆದಿದ್ದ, ಯಾವುದೋ ಒಂದು ಪತ್ರಿಕೆಯ ಕೊನೆಯ ಹಾಳೆಯ ಕೊನೆಯ ಭಾಗ ವನ್ನಲಂಕರಿಸಿದ್ದ, ಬಹುಶಃ ಯಾರೂ ಓದದಿದ್ದ, ಒಂದು ಪದ್ಯದ ಒಂದು ಪಾದವನ್ನು ಹೇಳಿಯೇ ಬಿಟ್ಟ.

ಹೊಗಳಿಕೆಗೆ ಸೋತು ಹೋಗೆನೆಂದು ಪ್ರತಿಜ್ಞೆಮಾಡಿದ್ದ ನನ್ನ ಮುಖವು ಸ್ವಲ್ಪ ಕೆಂಪೇರಿತು. ಯಾರು ಏನೇ ಹೇಳಲಿ; ಹೊಗಳಿಕೆ ಯಷ್ಟು ಪ್ರಿಯವಾದುದು ಬೇರೆ ಯಾವ ವಿಷಯವೂ ಇಲ್ಲ. ಅದು ಮನಸ್ಸಿಗೆ ಮದ್ಯ. ಕರ್ಣಾಟಕದ ತಬ್ಬಲಿ ಲೇಖಕರಲ್ಲವೆ? ನಮ್ಮನ್ನು ಯಾರು ಕೇಳುತ್ತಾರೆ? ನಿಂದೆಯನ್ನು ಕೇಳಿದ ಕಿವಿಗೆ—ಧರ್ಮಾರ್ಥವಾಗಿ

ದೊರೆತ ಪ್ರಶಂಸೆ ಅಮೃತವಾಗದಿರಲಿಲ್ಲ. ಇದುವರೆಗೆ ಮೌನವ್ರತಧಾರಿಯಾಗಿದ್ದ ನಾನು ತುಟಿ ತೆರೆಯುವ ಅಭಿಲಾಷೆಯುಳ್ಳವನಾದೆ.

ನನ್ನ ತುಟಿಗಳು ಅವನ ದೃಷ್ಟಿಯಿಂದ ತಪ್ಪಿಸಿಕೊಳ್ಳಲಿಲ್ಲ. ನಾನು ಸೋತೆನೆಂದೇ ಆತ ಊಹಿಸಿರಬೇಕು, ಕೂಡಲೆ ಆತನ ನಿರರ್ಗಳವಾದ ಮಾತಿನೆಡೆಯಲ್ಲಿ ನನ್ನ ಮಾತೂ ಒಂದೊಂದು ಸೇರತೊಡಗಿತು. ಗದ್ಯ ಲೇಖನದ ಸಾಮಾನ್ಯ ವಿಮರ್ಶೆಯಾಯಿತು. ಪದ್ಯ ಕಾವ್ಯಗಳ ಪರಾಮರ್ಶೆಯಾಯಿತು. ಆಧುನಿಕ ಕವಿಗಳ ಟೀಕೆಯಾಯಿತು. ಟೀಕೆಯು ನಿಂದೆಯ ಸೀಮೆಯನ್ನು ಮುಟ್ಟಿತು. ನನ್ನ ಹೊರತು ಉಳಿದವರೆಲ್ಲ ನಿಕೃಷ್ಟರೆಂದು ಅವನಿಗೆ ತೋರಿತು; ನನಗೇಕೆ ತೋರಬಾರದು? ಕೊನೆಗೆ ನನ್ನ ಅಭಿಪ್ರಾಯವೂ ಅವನದೂ, ನನ್ನ ಮಾತೂ ಅವನ ಮಾತೂ ಧ್ವನಿ ಪ್ರತಿಧ್ವನಿಗಳಾದುವು. ಒಂದಲ್ಲ, ಹಲ ವಿಷಯಗಳಲ್ಲಿ ಅಥವಾ ಎಲ್ಲ ವಿಷಯಗಳಲ್ಲಿ, ಅವನ ಮೆಳ್ಳೆಗಣ್ಣು, ಕರಿಮೋರೆ, ಗಿಡ್ಡ ದೇಹ, ಡೊಂಕು ಮೂಗು,—ಇಷ್ಟನ್ನು ಬಿಟ್ಟು ಉಳಿದೆಲ್ಲ ವಿಷಯಗಳಲ್ಲಿ—ನಾನೂ ಅವನೂ ಒಂದೇ ಪುಸ್ತಕದ ಎರಡು ಆವೃತ್ತಿಗಳಂತೆ ಆದೆವು. ನಾನು ಮಾತ್ರ ಮಿತಭಾಷಿ; ಅವನು ವಾಚಾಲ—ಎಂದಿಷ್ಟೆ ನಮ್ಮೊಳಗಿನ ಆ ಕಾಲದ ಭೇದ.

ಹೀಗಿದ್ದರೂ, ಮೋಹನರಾಯನಿಂದ ವಿಮೋಚನೆಹೊಂದಿದ ಅನಂತರ—ಇಲ್ಲಿ ಹೊಸಬನ ಹೆಸರು ಮೋಹನರಾಯನೆಂದು ತಿಳಿಸುವುದಕ್ಕೆ ಮರೆತೆ. ನಾನು ಕೇಳದೆ ಆತನ ಮಾತಿನಿಂದಲೇ ಹೆಕ್ಕಿದ ವಿಷಯವದು ಆ ಹೆಸರು!—ನನ್ನಲ್ಲಿ ನಾನೇ ಯೋಚಿಸಿದೆ: ನಾನು ಸಂದೇಹಾತ್ಮ. ಆವೇಶದ ರಭಸದಲ್ಲಿ ಏನಾದರೊಂದು ಅಭಿಪ್ರಾಯವನ್ನು ಹಿಡಿದುಕೊಂಡರೂ, ಅದಿಳಿದ ಮೇಲೆ ಆಳವಾಗಿ ವಿಚಾರಿಸುವ ಸ್ವಭಾವವು ಹುಡುಗತನದಿಂದಲೂ ನನ್ನೊಡನೆ ಬೆಳೆದುಬಂದಿತ್ತು. ನನ್ನ ಆ ವಿಚಾರಸರಣಿಗೆ ಅನುಸಾರವಾಗಿ ಮೋಹನರಾಯನ ಚರ್ಯೆಯನ್ನೆಲ್ಲ ನೆನಪಿಗೆ ತಂದು, ಅದಕ್ಕೆ ಟೀಕೆಯನ್ನೂ ಬರೆದೆ. ಅವನ ಮುಂದುಗಡೆಯಲ್ಲಿ ನಾನು ಹೇಗೆ ವರ್ತಿಸಿದ್ದರೂ, ಅವನ ಬೆನ್ನ ಹಿಂದೆ "ಈತನು ಅಧಿಕ—ಅತ್ಯಧಿಕ—ಪ್ರಸಂಗಿ" ಎಂದು ಅಂತರಾತ್ಮವು ಸಾರದಿರಲಿಲ್ಲ. ಅವನ ಮೂಗಿನ ಮುಂದೆಯೇ ಹೀಗೆ ಹೇಳಿಬಿಡೋಣವೆ? ಅಷ್ಟು ನಿಷ್ಠುರನು

ನಾನಲ್ಲ; ಹೇಳದಿದ್ದರೆ, ಪ್ರತಿ ದಿನ—ನಾಳೆ ಬರುತ್ತೇನೆ—ಎಂದು ಭಯೋತ್ಪಾದನೆಮಾಡುವವನಿಂದ ನನಗೆ ಬಿಡುಗಡೆಯೆಲ್ಲಿ? ಕೊನೆಗೆ ಹೀಗೆ ನಿರ್ಧರಿಸಿದೆ: ದಿನಗಳೂ ಬರುತ್ತವೆ; ಮೋಹನರಾಯನೂ ಬರುತ್ತಾನೆ; ಅವನ ಬಾಯಿಯಿಂದ ಸ್ತುತಿಪಾಠವೂ ಬರುತ್ತಿದೆ. ಏಕೆ ಬರಬಾರದು? ಅದರಿಂದ ನನಗೇನು ನಷ್ಟ? ನಷ್ಟವಿಲ್ಲದೆ ಹೊಗಳಿಕೆ ಸಿಕ್ಕಿದರೆ ಹಾನಿಯೇನು? ನಾನು ಉಬ್ಬಿಹೋಗಬಾರದು; ಹೆಮ್ಮೆಯಿಂದ ಕುರುಡಾಗಬಾರದು. ತಾವರೆಲೆಯ ಮೇಲೆ ಬಿದ್ದ ಜಲಬಿಂದು ಎಂದು ಹೇಳುತ್ತಾರಲ್ಲ ತಿಳಿದವರು? ಆ ಜಲಬಿಂದುವಿನಂತೆ ನಿರ್ಲಿಪ್ತನಾಗಿ ಕುಳಿತುಬಿಟ್ಟರೆ ಸರಿ. ಆದರೆ, ಅವನ ಬಾಯಿಯಿಂದ ಹೊರಡುವ ಎಲ್ಲ ಪ್ರಶಂಸೆಗಳಿಗೆ ನಾನರ್ಹನೆ? ಎಂಬ ಪ್ರಶ್ನೆ. ಅರ್ಹತೆಗೆ ತಕ್ಕುದಾದ ಮನ್ನಣೆಯನ್ನು ಈ ಪ್ರಪಂಚ ಕೊಡುವುದೇ? ಸಲ ಬೇಕಾದುದನ್ನು ಕೊಡದ ಮೇಲೆ, ಸಲುವುದಕ್ಕಿಂತ ಹೆಚ್ಚನ್ನು ಅದೇ ಪ್ರಪಂಚದಿಂದ ಹೇಗಾದರೂ ಕಿತ್ತುಕೊಳ್ಳಬಾರದೇಕೆ? ಈಗಲೂ ನನ್ನಲ್ಲಿರುವ ಗುಣವನ್ನು ಯಾರು ಲೆಕ್ಕಿಸಿದರು? ಇಂತಹದೇ ಆದ ಜನ ಮುಂದೆಯೂ ನನ್ನನ್ನು ಗಣಿಸುವುದೆಂಬುದು ಬಯಲಭ್ರಾಂತಿಯಾಗದೆ? ಮೋಹನರಾಯನು ಇಂದೇ—ಈ ಸಿಷ್ಮುರವಾದ, ಗುಣಗ್ರಾಹಿಯಲ್ಲದ ‘ಲೋಕದಲ್ಲಿ ನಿಂತು, ನನ್ನ ಗುಣಗಳನ್ನು ತಿಳಿದಿದ್ದಾನೆ. ಅತನ ಹೊಗಳಿಕೆಯಲ್ಲಿ ಅತಿರೇಕವಿರಬಹುದು, ಇರಲಿ—ನಾನದನ್ನು ಮಿತವಾಗಿ ಸ್ವೀಕರಿಸಬಾರದೇಕೆ?

ದಿನಗಳು ಕಳೆದುವು. ದಿನಂಪ್ರತಿ ಮೋಹನರಾಯನ ದರ್ಶನವೂ ಆಯಿತು. ಮೊದಮೊದಲು ಆತನ ಮಾತು ಕೇಳಿ ನನ್ನ ಕೆನ್ನೆ ಕೆಂಪೇರುತ್ತಿತ್ತು. ಇದು ಸಿಟ್ಟಿನ ವಿಕಾರವೋ ಲಜ್ಜೆಯ ಪ್ರಕಾರವೋ ಹೇಳುವುದು ಕಷ್ಟ. ಅಂತೂ ಒಂದು ಬಗೆಯ ಮೆಚ್ಚು; ಒಂದು ಬಗೆಯ ಹೇವರಿಕೆ. ಎರಡೂ ಸೇರಿ ನನಗೆ ಏನೇನೋ ಆಗುತ್ತಿತ್ತು. ರೋಗಿಯ ಸ್ಥಿತಿಗತಿಗಳನ್ನು ಕಂಡು ಔಷಧದ ಪ್ರಮಾಣವನ್ನು ಹೆಚ್ಚು ಕಡಿಮೆಮಾಡುವ ವೈದ್ಯನಂತೆ, ಅವನೂ ತನ್ನ ಮಾತುಗಳ ವಿಧಾನವನ್ನು ಬದಲಾಯಿಸುತ್ತಿದ್ದ. ಆದರೆ ಧಾಟಿ ಒಂದೇ—ಈ ಮನುಷ್ಯ ಲೋಕವು ನನ್ನಂತಹ ಜಡ ಲೇಖಕನಿಗೆ ಮಾಡುವ ಅನ್ಯಾಯವು ಅಸಹ್ಯ........ರತ್ನಗಳು ಕೆಸರಲ್ಲಿ ಬಿದ್ದು ಅಡಗಿರಬೇಕಾಗುತ್ತದೆ. ಅಂತಹದೊಂದು ದಿವ್ಯ ರತ್ನ

ನಾನು. ಮೋಹನರಾಯ ಬಂದು ಈ ರತ್ನವನ್ನು ಮೆಲ್ಲನೆ ಕೆಸರಿನಿಂದೆತ್ತಿ, ತೊಳೆದು, ಹಿಡಿದು, ತಾಬೂಲು ಕಡಿದು, ಲೋಕದ ಮುಂದೆ ಥಳಥಳ ಗೊಳಿಸಲು ಪೇಚಾಡುತ್ತಿದ್ದಾನೆ!—ನನ್ನ ಮನಸ್ಸಿಗೂ ಇಂತಹ ನಂಬಿಕೆ ಅಡರಿಬಿಟ್ಟಿತು. "ಆದುದರಿಂದಲೆ' ಕುರೂಪಿಗಳ ಬುದ್ಧಿಯೂ ಕುರೂಪ; ಮೆಳ್ಳೆಗಣ್ಣರನ್ನು ಸರ್ವಥಾ ನಂಬಬೇಡಿ" ಎಂಬ ನನ್ನ ಆದರ್ಶವಾಕ್ಯವು ಸ್ವಲ್ಪ ಸ್ವಲ್ಪ ಬದಲಾವಣೆಹೊಂದಬೇಕಾದ ಕಾಲವು ಬಂದೇ ಹೋಯಿತು.

*  *  *  *

ಒಂದು ದಿನ ಬೆಳಗಾತ ಗಡಿಬಿಡಿಯಿಂದ ಬಂದು ಮೋಹನರಾಯ ನನ್ನ ಕೋಣೆಯ ಬಾಗಿಲುಗಳನ್ನು ತಟ್ಟಿದ. ಒಳಗಿನಿಂದ ಅಗುಳಿ ಹಾಕಿ ನಿದ್ರಿಸುತ್ತಿದ್ದ. ನನಗೆ ಎಚ್ಚರವಾಯಿತು. ಎದ್ದು ಬಾಗಿಲು ತೆರೆದು ಆತ ನನ್ನು ಒಳಗೆ ಬಿಟ್ಟೆ. "ಏನು ಮೋಹನ! ಈ ದಿನ ಬೆಳಗಾತವೇ ಸವಾರಿ?" ಎಂದು ಪ್ರಶ್ನಿಸಿದೆ. "ಹೇಳುವುದೇನು ಸ್ವಾಮಿ! ನಾನಿರುವ ಮನೆಯಲ್ಲಿ ಇಲಿ ಬಿದ್ದಿದೆ. ಮನೆ ಬಿಡದೆ ಉಪಾಯವಿಲ್ಲ. ಇಲ್ಲಿಗೇ ಓಡಿಬರಬೇಕೆಂದು ಆತ್ಮ ಪ್ರೇರಣೆಯಾಯಿತು" ಎಂದು ಆತನ ಉತ್ತರ. "ನಮ್ಮ ಭವನದ ಯಜಮಾನರಲ್ಲಿ ಮಾತಾಡುತ್ತೇನೆ. ಬಾಡಿಗೆಗೆ ಕೋಣೆ ಸಿಕ್ಕಬಹುದು; ಸಿಕ್ಕದಿದ್ದರೆ ಹತ್ತೆಂಟು ದಿನವಲ್ಲವೆ? ಇಲ್ಲಿ ಇದ್ದು ಕೊಳ್ಳಿ" ಎಂದು ನನ್ನ ಭರವಸೆ ಹೋಯಿತು. "ನನ್ನ ಆತ್ಮ ಪ್ರೇರಣೆ ಸುಳ್ಳಾಯಿತೆ? ಇಂತಹ ಕಾಲದಲ್ಲಿ ನನಗೆ ನಿಮ್ಮಿಂದ ಮಾತ್ರ ಸಹಾಯ ದೊರೆತೀತೆಂದು ಎಣಿಸಿದ ಬುದ್ಧಿ ಎಂತಹದು?" ಎಂದು ತನ್ನ ತೀಕ್ಷ್ಣ ಮತಿಯನ್ನು ತಾನೆ ಕೊಂಡಾಡಿ ನನ್ನ ಮುಖ ನೋಡಿದ. ಅವನ ಯೋಚನೆಗೇ ಜಯ ಸಿಕ್ಕಿತು. ನಮ್ಮ ಭೋಜನ ಭವನದ ಯಜಮಾನರಲ್ಲಿ ವಿಚಾರಿಸಲಾಗಿ, ಖಾಲಿಯಾದ ಕೋಣೆಗಳು ಇದ್ದುವು. ಆದರೆ ಹತ್ತೆಂಟು ದಿನಕ್ಕೆ ಕೊಡಬಹುದಾದ ಕೋಣೆಗಳಿರಲಿಲ್ಲ; ಎಂದು ತಿಳಿಯಿತು. ಯಾರ ಮನೆಯಲ್ಲಿಯೋ ಬಿದ್ದ ಇಲಿ, ಮೋಹನರಾಯನನ್ನು ನನ್ನ ಕೋಣೆಗೆ ಓಡಿಸಿತು ಮಾತ್ರವಲ್ಲ; ಭವನದ ಯಜಮಾನರಿಂದ ನಕಾರದ ಉತ್ತರವನ್ನು ಬರಿಸಿ ನನ್ನನ್ನೂ ಅವನನ್ನೂ ಸಹವಾಸಿಗಳನ್ನಾಗಿ ಮಾಡಿತು; ಪರಿಸ್ಥಿತಿಯ ಪ್ರಭಾವ!

"ಇನ್ನು ಸ್ಥಳ ಹುಡುಕುವುದಕ್ಕೆ ಊರೆಲ್ಲ ಅಲೆದಾಡಬೇಕೆ? ಕೋಣೆ

ಸಿಕ್ಕುವ ಹೊತ್ತಿಗೆ ಹೊರಟುಹೋಗುವ ಕಾಲ ಬರುತ್ತದೆ. ಹತ್ತೆಂಟು ದಿನವಲ್ಲವೆ? ಇಲ್ಲಿಯೇ ಇರಿ. ತಿಂಗಳಿಗೆ ನಾಲ್ಕು ರೂಪಾಯಿ ಬಾಡಿಗೆ ಕೊಡುವುದರಿಂದ ಈ ಕೋಣೆ ನನ್ನದಾಗಿದೆ. ಸ್ಥಳಸಂಕೋಚವಿದೆ. ಆ ಕಷ್ಟವನ್ನು ಸಹಿಸುವಿರಾದರೆ, ಅಷ್ಟು ದಿನ ಒಡನಾಡಿಗಳಾಗಿ ಇರೋಣ" ಎಂದಿಷ್ಟು ನನ್ನ ಬಾಯಿಯಿಂದ ಹೊರಟಿತು.

ಹೇಳಿ ನಿಮಿಷಗಳು ಕಳೆದಿರಬಹುದು. ಮೋಹನರಾಯನು ತನ್ನ ಗಂಟುಮೂಟೆ ಪೆಟ್ಟಿಗೆಗಳನ್ನು ಹೊತ್ತುಕೊಂಡ ಆಳಿನೊಡನೆ ಬಂದೇ ಬಿಟ್ಟ. "ನನ್ನ ಲೋಕವಿಷ್ಟೆ ನೋಡಿ....ಈ ಗಂಟುಮೂಟೆಗಳೊಳಗೆ ಅಡಗುವಷ್ಟು....ಎಷ್ಟು ಜಾಗಬೇಕಾದೀತು? ರಾತ್ರಿ ನಾಲ್ಕು ಘಂಟೆ ಮೈ ಚಾಚಿದರಾಯಿತು....ಈ ಸಾಮಾನುಗಳನ್ನು ಇಲ್ಲಿ ಅಲ್ಲವಾದರೆ, ಅಂಗಳ ದಲ್ಲಿಟ್ಟರೂ ಚಿಂತೆಯಿಲ್ಲ....ಅದರೊಳಗೆ ಏನಿದೆಯೆಂದು ಭಾವಿಸಿದ್ದೀರಿ? ಏನೂ ಇಲ್ಲ; ನನ್ನ ಕೆಲವು ಹಳೆಯ ಕವನಗಳು; ಇನ್ನು ತಮ್ಮಂತಹ.... ಅಂತಹ ಎನ್ನುವುದೇಕೆ........ತಮ್ಮ ಒಬ್ಬರ........ಪ್ರಕಾಶಿತ ಕವನಗಳ ಸಂಗ್ರಹ....ಯಾರಾದರೂ ಕದ್ದುಕೊಂಡು ಹೋಗಬಹುದೆನ್ನುತ್ತೀರಾ? ಹೋಗಲಿ....ಹಳೆಯ ಬಟ್ಟೆಗಳನ್ನಾದರೂ ಕಳಬಹುದು....ಆ ಪುಸ್ತಕ ಗಳು ಯಾರಿಗೆ ಬೇಕು ಭಟ್ಟರೇ! "ಅವುಗಳಿದ್ದರೆ ನನ್ನ ಜಗತ್ತಿನಲ್ಲಿ ಸರ್ವವೂ ಇದ್ದ ಹಾಗೆಯೆ!" ಎಂದು ಆಡುತ್ತಿರುವಂತೆಯೇ ಮೋಹನ ರಾಯನು, ಗಂಟುಮೂಟೆಗಳನ್ನು ನನ್ನ ಹಾಸಿಗೆ ಕಟ್ಟಿನ ಮೇಲಿಟ್ಟು ಪೆಟ್ಟಿಗೆಯನ್ನು ಮೇಜಿನ ಮೇಲಿರಿಸಿ, ಆಳಿಗೆ ನಾಲ್ಕಾಣೆ ಕೊಟ್ಟು, ಕಳು ಹಿಸಿ ಇದಿರಲ್ಲಿಯೆ ಇದ್ದ ಮಲಗು ಕುರ್ಚಿಯ ಮೇಲೆ ಬಿದ್ದು, ಎಡ ಗಾಲಿನ ಮೇಲೆ ಬಲಗಾಲನ್ನಿಟ್ಟು ಸುಖಾಸೀನನಾಗಿ "ಭಟ್ಟರೇ! ಮತ್ತೇನು ವಿಶೇಷ....ಹೇಳಿ ನೋಡೋಣ....ಇನ್ನು ಸಮಯವೆಲ್ಲ ನಮ್ಮದು....ನಿಮ್ಮಂಥವರ ಸಹವಾಸದಲ್ಲಿ ಹೊತ್ತು ಕಳೆದರೆ ತಿಳಿದೀತೆ?" ಎಂದು ತೃಪ್ತಿಯಿಂದ ನಕ್ಕ.

ದಿವಸ ಎಂಟು ಕಳೆಯಿತು, ಹತ್ತಾಯಿತು; ಹದಿನೈದೂ ದಾಟಿತು. ಇಷ್ಟರಲ್ಲಿ ಭವನದ ಯಜಮಾನರಲ್ಲಿ ಮಾತಾಡಿ ಊಟದ ವ್ಯವಸ್ಥೆ ಯಾಗಿತ್ತು. ಪಾನೀಯ ಮಂದಿರದಲ್ಲಿ ಕಾಫಿಯ ಏರ್ಪಾಡೂ ನಡೆದಿತ್ತು. ಹದಿನೈದು ದಿನ ಹೋಗುವಷ್ಟರಲ್ಲಿ—ಅಯ್ಯೊ! ಇಡೀ ಮಂಗಳೂರು

ನಗರದಲ್ಲಿ ಬೀದಿ ಬೀದಿ ಅಲೆದಾಡಿದ್ದೇನೆ. ಇಂತಹ ಒಂದು ಹೊಟೇಲು ಸಿಕ್ಕಬೇಕೆ? ಇಂತಹದೊಂದು ಕಾಫಿ ಕ್ಲಬ್ಬು ಕಾಣಬೇಕೆ? ಇದನ್ನಾರಿಸಿದ ನೀವೇ ಜಾಣರು. ಕಾವ್ಯರಸಿಕರು ಮಾತ್ರವಲ್ಲ; ಷಡ್ರಸದಲ್ಲಿಯೂ ರಸಿಕರು........ಇಷ್ಟು ರುಚಿಕರವಾದ ಊಟ ತಿಂಡಿಗಳನ್ನು ಸೇವಿಸಿದ ಮೇಲೆ ಆ ಗುಂಡಾ ಭಟ್ಟನ ತಂಗಳನ್ನ ನಾಲಗೆಗೆ ಒಗ್ಗೀತೆ?—ಎಂದು ಮೋಹನರಾಯ ಪ್ರಶ್ನಿಸ ತೊಡಗಿದ. ಸಂಭವವೇನೆಂದು ತಿಳಿಯಿತು. ಬಂದು ನಿಂತ ಮೇಲೆ ಕಾಲು ಕೇಳುವ ಜನ ಇದಲ್ಲ, ಎಂದು ತಿಳಿಯಿತು. ತಪ್ಪೇನು? ಅವನು ಸಂಗಡಿಗನಾಗಿದ್ದರೆ ಬಾಧಕವೇನು? ಎಂದೂ ತೋರಿತು. ನಾನೊಬ್ಬ ಏಕಾಕಿ. ನನಗೇನಾದರೂ ನೋಡುವವರಿಲ್ಲ, ಕೇಳುವವರಿಲ್ಲ. ಒಬ್ಬನಿಗಿಂತ ಇಬ್ಬರೇ ಮೇಲಲ್ಲವೆ? ಮೋಹನರಾಯನ ನಡತೆಯಲ್ಲಿ ಹೇಯುವೆನಿಸುವದೇನೂ ತೋರಲಿಲ್ಲ. ಧಾರಾಳ ಮಾತಾಡು ತ್ತಾನೆ; ನಗುತ್ತಾನೆ; ನಗಿಸುತ್ತಾನೆ. ಇದೊಂದು ಕೆಟ್ಟ ಸ್ವಭಾವವೇ? ಎಂದೂ ಅಲ್ಲ. ಅವನು ಅಮಿತವಾಗಿ ಹೊಗಳಿದರೂ ನಾನು ಮಿತ ವಾಗಿಯೇ ಕೇಳುತ್ತೇನೆ ಎಂದ ಮೇಲೆ ಸಂಪರ್ಕ ದೋಷಕ್ಕೂ ಎಡೆಯಿಲ್ಲ ವಷ್ಟೆ?

ಸಲಿಗೆಯ ಈ ದಿನಗಳಲ್ಲಿ ನಮ್ಮಿಬ್ಬರ ಭೋಜನ ಪಾನ ವಸತಿ ಸ್ಥಳಗಳು ಒಂದಾಗಿದ್ದುವಷ್ಟೆ. ಇಡೀ ಮಂಗಳೂರಿನಲ್ಲಿ ಸದಾನಂದ ವಿಲಾಸ ಕಾಫಿ ಕ್ಲಬ್ಬಿನವರಿಗೆ ದೊರೆಯುವಂತಹ ಕಾಫಿ ಬೀಜ ಬೇರೆ ಯಾರಿಗೂ ದೊರೆಯುವ ಹಾಗಿಲ್ಲ; ದೊರೆತರೂ ಕಾಫಿ ಬೀಜ ಹುರಿ ಯುವುದಕ್ಕೆ ತಿಳಿದಿಲ್ಲ; ತಿಳಿದಿದ್ದರೂ ಕಾಫಿಯ ಕಷಾಯ ತಯಾರಿಸು ವುದಕ್ಕೆ ಬರುವುದಿಲ್ಲ. ಒಂದು ವೇಳೆ ಕಷಾಯ ತಯಾರಾದರೂ ಹಾಲನ್ನೂ ಅದನ್ನೂ ಸಕ್ಕರೆಯನ್ನೂ ಬೆರಸುವಾಗ ಏನೋ ತಪ್ಪುಮಾಡಿ ಕಾಫಿಯ ರುಚಿಯನ್ನು ಕೆಡಿಸಿಯೇ ಬಿಡುತ್ತಾರೆ. ಎಂದು ಮೋಹನ ರಾಯರು ತೀರ್ಮಾನಕೊಟ್ಟರು. ಅವರ ತೀರ್ಮಾನವಾಗುವ ಮುಂಚೆಯೂ ನಾನು ಅಲ್ಲಿಗೆ ಹೋಗುತ್ತಿದ್ದೆ. ಬೇರೆ ಕಾಫಿ—ದೋಸೆ ಗಳನ್ನು ದೂಷಿಸದೆ, ಅಲ್ಲೆ ಸಮೃದ್ಧಿಯಾಗಿ ತಿಂದು ಕಾಫಿ ಕುಡಿದು ಬರುತ್ತಿದ್ದೆ. ಅಲ್ಲಿಯ ಕಾಫಿಯ ಶ್ರೇಷ್ಠತೆಗೆ ಮೋಹನರಾಯ ಸರಿಯಾದ ಕಾರಣಗಳನ್ನು ಕಂಡು ಹಿಡಿದ ಮೇಲಂತೂ ನಾವಿಬ್ಬರೂ ಪ್ರತಿದಿನ ಎರಡು

ಬಾರಿ ಅಲ್ಲಿಗೆ ಹೋಗುತ್ತಿದ್ದೆವು. ಒಮ್ಮೊಮ್ಮೆ ನಾನು ಹೋಗುವುದೂ ಅವನು ಹೋಗುವುದೂ ಹಿಂದೆ ಮುಂದಾಗುತ್ತಿದ್ದರೂ ಹೋಗದೆ ಇರುತ್ತಿರಲಿಲ್ಲ. ಒಂದು ದಿನ ಸದಾನಂದ ಕಾಫಿ ಕ್ಲಬ್ಬಿನ ವೈಕುಂಠರಾಯರು ತಯಾರಿಸಿದ ಕಾಫಿ ಆಗ ತಾನೇ ಸ್ವರ್ಗದಿಂದ ಸುರಿದ ಅಮೃತಕ್ಕೆ ಸಮಾನವಾಗಿತ್ತು. ಆ ದಿನ ಮೋಹನನಲ್ಲಿ ಕುರಿತಾಗಿ ಕೇಳಿದೆ........"ಇಂದಿನ ಕಾಫಿ ಹೇಗೆ?" ಎಂದು. "ದಿವ್ಯ........ಈ ಜನ್ಮದಲ್ಲಿ ಇಂತಹದನ್ನು ಕಂಡುದಿಲ್ಲ" ಎಂದ ಮೋಹನರಾಯ. "ಇದು ದಿವ್ಯವಾಗುವ ಕತೆಯನ್ನು ಕೇಳುತ್ತಿರೊ ..........ವೈಕುಂಠರಾಯ ಉಬ್ಬಾಳು...........ನಿನ್ನಿಂದಲೇ ಸೂರ್ಯೋದಯವಾಗುತ್ತದೆ ಎಂದು ಹೊಗಳಬೇಕು........ಆಗ ನೀರನ್ನು ಕಾಣದ ಗಟ್ಟಿ ಹಾಲಿಗೆ ಕಷಾಯ ಬೆರಸಿ ಕೊಡುತ್ತಾನೆ" ಎಂದು ಕತೆ ಹೇಳಿದೆ. "ಓಹೋ! ಹಾಗೊ........ಹಾಗಿದ್ದರೆ ಚೆನ್ನಾಯಿತು......ನಿಮ್ಮ ಜೊತೆಗೆ ನಾನೂ ದಿನಂಪ್ರತಿ ಸೇರಿಕೊಳ್ಳುತ್ತೇನೆ....ಒಬ್ಬರೇ ಹೊಗಳಿದರೆ ಇಷ್ಟು ಚೆನ್ನಾಗುವ ಕಾಫಿ ನಾವಿಬ್ಬರೂ ಹೊಗಳಿದರೆ ಎಷ್ಟು ಚೆನ್ನಾಗದು!" ಎಂದು ಮೋಹನ ರಾಯನು ಕೇಳಿದ. ಕಾಫಿ ಚೆನ್ನಾದುದು ಮಾತ್ರವಲ್ಲ. ನಮ್ಮ ಲೆಕ್ಕಾಚಾರವೂ ಚೆನ್ನಾಗಿ ಒಂದೇ ಆಯಿತು. ವೈಕುಂಠರಾಯನೊಮ್ಮೆ ಹೀಗೆ ಪ್ರಸ್ತಾಪಿಸಿದ......."ನೀವಿಬ್ಬರೂ ಒಂದೇ ಅಳತೆಯಿಂದ ಕಾಫಿ ಕುಡಿಯುತ್ತೀರಿ; ಒಂದೇ ಕಾಲದಲ್ಲಿ ಬರುತ್ತೀರಿ, ಹೋಗುತ್ತೀರಿ; ಅಣ್ಣತಮ್ಮಂದಿರಂತೆ ತೋರುತ್ತೀರಿ........ಒಂದೇ ಲೆಕ್ಕ ಬರೆದರೆ ಆಗದೆ?" ಆಗದೆಂದು ಹೇಳುವುದಾದರೂ ಹೇಗೆ? "ಹೂಂ" ಎಂದು ಉತ್ತರ ಕೊಟ್ಟೆ........ವೈಕುಂಠರಾಯರು ಬೋಧಿಸಿದುದು ಒಂದು ಬಗೆಯ ಸಾಮ್ಯವಾದವನ್ನಲ್ಲವೇ? ಆಧುನಿಕರಾದ ನಾವು ಅದನ್ನು ಒಲ್ಲೆವೆನ್ನುವುದು ಸಭ್ಯಾಚಾರವೇ? ನಾನು "ಹೂಂ" ಎಂದಿಷ್ಟೆ ಉದ್ಗರಿಸಿದಾಗ ಮೋಹನರಾಯ ಅಭಯಕೊಟ್ಟ: "ಆಗಬಹುದು ಭಟ್ಟರೇ! ಅವಶ್ಯವಾಗಿ ಆಗಬಹುದು. ನಮ್ಮ ಧ್ಯಾನ, ಧ್ಯೇಯ, ಮಾರ್ಗ, ಅಭಿರುಚಿ....ಎಲ್ಲ ಒಂದಾಗಿರುವಾಗ, ಅವುಗಳಿಗಿಂತ ಎಷ್ಟೋ ಕೀಳಾದ ಈ ಹಣಕಾಸಿನ ಲೆಕ್ಕ ಬೇರಾಗಿರಬೇಕೆ? ಇದೊಂದರಲ್ಲಿ ಭೇದವೇಕೆ?" "ಆ–ಗ–ಲಿ" ಎಂದು ನನ್ನ ಬಾಯಿಯಿಂದ ಸಮ್ಮತಿ ಹೊರಟಿತು.

ಕೆಲ ವಾರಗಳ ಅನಂತರ ಒಮ್ಮೆ ಪೇಟೆಯಲ್ಲಿ ಸುತ್ತಾಡುತ್ತಿದ್ದೆವು.

ಜವಳಿ ಅಂಗಡಿ ತಮ್ಮಣ್ಣನಾಯಕನ ದೃಷ್ಟಿ ನಮ್ಮ ಮೇಲೆ ಬಿದ್ದಿತು. ‘‘ಬನ್ನಿ ಸ್ವಾಮಿ....ಬನ್ನಿ....ಒಳ್ಳೊಳ್ಳೆಯ ಮಾಲು ಬಂದಿದೆ....ನಿನ್ನೆ ತಾನೆ ಬೊಂಬಾಯಿಯಿಂದ ಬಂದ ಮೂಟೆಗಳನ್ನು ಈಗ ಬಿಚ್ಚಿದೆನಷ್ಟೆ.... ಬೇಕಿದ್ದರೆ ತೆಗೆದುಕೊಳ್ಳಿ....ನಾಳೆ ಈ ಸಾಮಾನು ಉಳಿದೀತೆಂದು ಹೇಳುವ ಹಾಗಿಲ್ಲ....ನಿಮಗೆ ನಾಜೂಕಿನ ಬಟ್ಟೆಬರೆ ಆಗಬೇಕೆಂದು ತಿಳಿದೇ—ದಾರಿಯಲ್ಲಿ ಹೋಗುವವರನ್ನು ಕರೆದೆ; ಕ್ಷಮಿಸಿ!” ಎಂದು ಪ್ರೀತಿಯಿಂದ ಕರೆದನು. ನನಗೆ ಜವಳಿಯ ಪರೀಕ್ಷೆ ಗೊತ್ತಿರಲಿಲ್ಲ. ಮೋಹನರಾಯ ಅದರಲ್ಲಿಯೂ ನಿಪುಣ. ನನ್ನನ್ನು ಕುಳಿತಲ್ಲಿಯೇ ಬಿಟ್ಟು ನಾಯಕರ ಬೆನ್ನಂಟಿಕೊಂಡು ಅಂಗಡಿ ಮಾಳಿಗೆ ಹತ್ತಿ ಅಥವಾ ದಾಳಿಯಿಟ್ಟು, ಅರ್ಧ ಘಂಟೆ ಕಾಣೆಯಾದ. ಸ್ನೇಹಿತರಾದ ಅಂಗಡಿ ಗಾರರು ಕರೆವಾಗ ಹೋಗದಿರುವುದು ಅಸಭ್ಯಾಚಾರವೆಂದು ನಾನು ಅಂಗ ಡಿಗೆ ಕಾಲಿಟ್ಟುದು; ಅವರಲ್ಲಿ ಹೇಳದೆ ಹೋಗಬಾರದೆಂದು ಮತ್ತೆ ಅರ್ಧ ಘಂಟೆ ಆಕಳಿಸುತ್ತಾ ಕುಳಿತುದು. ಅಷ್ಟರಲ್ಲಿ ನಾಯಕರೂ ರಾಯರೂ ಬಂದರು. ಅವರ ಹಿಂದೆ ಕೆಲಸದವನೊಬ್ಬ ಮಡಿವಾಳನ ಕತ್ತೆಬೆನ್ನಿನ ಹೊರೆಯಂತಹ ಮೂಟೆಯೊಂದನ್ನು ತಂದು ನಮ್ಮ ಮುಂದಿರಿಸಿದ. ಮೋಹನರಾಯ ಕಟ್ಟು ಬಿಚ್ಚಿ ವಸ್ತ್ರಗಳ ಬೆಡಗನ್ನು ನನಗೂ ತೋರಿಸಿದ. ಮೆಂಚೆಸ್ಟರ್ ಚೆಕ್ಕಿನ ಬಣ್ಣ ಬಲು ಚಂದವಾಗಿತ್ತು. ಪಟ್ಟೆ ಶಾಲಿನ ಮೈ ಭಾರಿ ನುಣುಪು. ಜರಿ ಮುಂಡಾಸೋ!—ಅಷ್ಟು ದಿವ್ಯವಾದುದನ್ನು ಯಾವ ಮಹಾರಾಜನಿಗೂ ತಲೆಯಲ್ಲಿ ಹೊರುವ ಪುಣ್ಯವಿರಲಿಲ್ಲ. ‘‘ಹೇಗೆ ಸ್ವಾಮಿ ನನ್ನ ಆಯ್ಕೆ? ಏನೆನ್ನುತ್ತೀರಿ ನನ್ನ ಕಲಾದೃಷ್ಟಿಗೆ?” ಎಂದು ನನ್ನನ್ನು ಪ್ರಶ್ನಿಸುತ್ತಾ ಮೋಹನರಾಯ ನಾಯಕರ ಕಡೆಗೆ ನೋಡಿ ‘‘ಸಾವುಕಾರರೆ ನನಗಿಷ್ಟು ಬಟ್ಟೆಬೇಕು. ಆದರೆ ಹಣ ತರಲಿಲ್ಲ. ನಿಮಗೆ ಭಟ್ಟರ ಪರಿ ಚಯವಿದೆಯಷ್ಟೆ. ಅವರ ಮುಖ ನೋಡಿ ನನಗೆ ಕೊಡುವಿರಾದರೆ....” ಎಂದು ಅರ್ಧೋಕ್ತಿಯನ್ನು ಆಡುವಷ್ಟರಲ್ಲಿಯೆ ನಾಯಕನು ಹೀಗೆಂದ: ‘‘ಹೀಗೂ ಉಂಟೆ? ಭಟ್ಟರನ್ನೂ ನಂಬದಿರುವುದೆ? ಶಾಲೆಗೆ ಹೋಗುತ್ತಿದ್ದ ಕಾಲದ ಪರಿಚಯ. ಅವರನ್ನು ನಂಬದಿದ್ದರೆ ಮಂಗಳೂರಲ್ಲಿ ಮತ್ತಾ ರನ್ನು ನಂಬಬೇಕು? ಅಂಥ ಮಾತುಗಳನ್ನು ಆಡಬೇಡಿ” ಈ ಮಾತು ಗಳಿಂದ ಮೋಹನನ ಬಾಯಿ ಮುಚ್ಚಿದುದರಲ್ಲಿ ಆಶ್ಚರ್ಯವಿಲ್ಲ! ನನ್ನದೂ

ಮುಚ್ಚಬೇಕೆ? ಮನಸ್ಸಿಗೇನೋ ಹೆದರಿಕೆಯುಂಟಾಯಿತು. ಅರ್ಧ ವಿನೋದಕ್ಕಾಗಿ ಅರ್ಧ ಸತ್ಯಕ್ಕಾಗಿ "ನನಗೆ ನಾಯಕರ ಪರಿಚಯವೂ ಇದೆ; ಮೋಹನರಾಯರದೂ ಇದೆ. ನನ್ನ ಮುಖ ನೋಡಿ ನಾಯಕರು ಇಡೀ ಅಂಗಡಿಯನ್ನು ಸೂರೆಕೊಡಲೂ ಬಹುದು; ಕೊಟ್ಟುದೆಲ್ಲವನ್ನು ಬಗಲಿಗೆ ಸೇರಿಸುವ ಅಸಾಮಿಯೇ ಇದು. ಒಂದು ದಿನ ಅಂಗಡಿಯನ್ನೆ ಬೋಳುಮಾಡಿ ಕಾಣೆಯಾದರೆ ನಾಯಕರೇನು ಮಾಡಬಹುದು? ಭಟ್ಟ ರೇನು ಮಾಡಬಹುದು?" ಎಂದು ನಾನು ಕೇಳಿದೆ. ಮೋಹನರಾಯ ಗಹ ಗಹಿಸಿ ನಕ್ಕ. "ಏನು ರಸಿಕರಯ್ಯ ನೀವು" ಎಂದ. ತಮ್ಮಣ್ಣನಾಯಕ ನಮ್ಮಂತಹ ನೂರು ಮಂದಿಯ ಹಣೆಬರಹನ್ನೋದಿದ ಜನ. "ನಮಗೆ ಹಣ ಯಾರಿಂದ ಬಂದರೇನು? ಮೋಹನರಾಯರಿಂದ ಬಂದರೂ ಸರಿ; ಭಟ್ಟರಿಂದ ಬಂದರೂ ಸರಿ" ಎಂದು ನಗುತ್ತಾ ಸತ್ಯವನ್ನೆ ನುಡಿದ. ಇಂದು ನಡೆದ ಸಂಗತಿಯೇಕೋ ಮನಸ್ಸಿಗೆ ಸುಖವನ್ನುಂಟುಮಾಡಲಿಲ್ಲ.

ಮತ್ತೆ ಕೆಲದಿನ ನಾನವನ ಕೂಡೆ ನಗರಸಂಚಾರಮಾಡುವ ಸಂಭವ ಗಳನ್ನು ತಪ್ಪಿಸುವುದಕ್ಕೆ ಯತ್ನಿಸಿದೆ. ಸಿನೆಮಕ್ಕೆ ಹೋಗೋಣವೆ? ಎಂದರೆ ಬೇಡವೆಂದು; ಸಮುದ್ರತೀರಕ್ಕೆ ಪಯಣ ಬೆಳೆಸೋಣವೆ? ಎಂದರೆ ಮೈಯಲ್ಲಿ ಸುಖವಿಲ್ಲವೆಂದು; ಸದಾನಂದ ವಿಲಾಸದ ಉತ್ಸಾಹ ವನ್ನಾದರೂ ಕುಡಿಯೋಣವೇ ಎಂದರೆ ತಲೆಗೆ ಪಿತ್ತವೇರಿದೆ; ಕೆಲದಿನದ ವರೆಗೆ ಕಾಫಿ ಕುಡಿಯಬಾರದೆಂದು ಡಾಕ್ಟರರ ಆಜ್ಞೆಯಾಗಿದೆ ಎಂದು. ಹೀಗೆ ನಮ್ಮೊಳಗೆ ಪ್ರಶ್ನೋತ್ತರಗಳಾದುವು. ನೋಡಿ ಹೊಡೆದ ಬಾಣ ಗಳೆಲ್ಲ ಗುರಿಮುಟ್ಟಿದುದು ಮೋಹನರಾಯನಿಗೆ ತಿಳಿದಿರಬೇಕು. ವ್ಯಕ್ತ ವಾಗಿ ಏನನ್ನೂ ತಿಳಿಸಲಿಲ್ಲ ಆತ. ಆದರೆ, ಇದು ವರೆಗೆ ನನ್ನ ಕಾಲ ಬುಡದಲ್ಲಿಯೇ ಕುಳಿತು, ನನ್ನ ನೆರಳಿನಂತೆಯೇ ಹಿಂದೆ ಸುಳಿಯುತ್ತಿದ್ದ ವ್ಯಕ್ತಿ, ಆಗಾಗ ಏಕಾಕಿಯಾಗಿ ಸುಳಿದಾಡುವುದಕ್ಕೆ ತೊಡಗಿದ. ಇಷ್ಟಾ ದರೆ ಬದುಕಿಕೊಂಡೇನು ಎಂದು ಭಾವಿಸಿದ್ದೆ; ಇಷ್ಟಾಯಿತು. ಸ್ವಲ್ಪ ಸಮಾಧಾನವೂ ಆಯಿತು.

* * * *

ಒಂದು ರಾತ್ರಿ ಎಂದಿನಂತೆ ನಾವಿಬ್ಬರೂ ಕೋಣೆಯೊಳಗೆ ಮಲ ಗಿದ್ದೆವು. ಕೋಣೆ ಬಾಗಿಲಿಗೆ ಅಗುಳಿಹಾಕಿತ್ತೆ ಇಲ್ಲವೆ ನೆನಪಿಲ್ಲ. ಈ

ನೆನಪು ಅವಶ್ಯವೂ ಅಲ್ಲ. ಮೋಹನರಾಯನು ಮಾಡಿದ ಕೆಲಸಕ್ಕೆ—ಒಳಗೆ ಬಲಿದ ಅಗುಳಿ ಪ್ರತಿಬಂಧಕವಾಗಿ ಇದ್ದಿರಲಾರದು. ನನಗೆ ಏಕೋ ಆ ದಿನ ಪದ್ಧತಿಗೆ ವಿರುದ್ಧವಾಗಿ ಬೆಳಗ್ಗೆ ಐದು ಘಂಟೆಗೇ ಎಚ್ಚರವಾಯಿತು. ಎಚ್ಚರವಾದೊಡನೆ ಮೋಹನರಾಯನ ಹಾಸಿಗೆಯಿದ್ದ ಕಡೆಗೆ ದೃಷ್ಟಿ ಹರಿಯಿತು. ಕತ್ತಲೆಯ ಮಧ್ಯದಲ್ಲಿ ಅಲ್ಲಿ ಏನೂ ತೋರಲಿಲ್ಲ; ಮೆಲ್ಲಗೆ ಹತ್ತಿರಕ್ಕೆ ಸರಿದು ಕೈಗಳಿಂದ ಬೆದಕಿದೆ. ಕೈಗೇನೂ ತಗಲಲಿಲ್ಲ. ಅತ್ತಿತ್ತ ಹಾಗೆಯೇ ಹುಡುಕಿ ನೋಡಿದೆ; ಏನೂ ಇರಲಿಲ್ಲ. ಬೆಂಕಿಕಡ್ಡಿ ಒರೆದು ನೋಡಿದೆ....ಮೋಹನರಾಯನು ಆಕ್ರಮಿಸಿದ್ದ ಐದಡಿ ಉದ್ದ ಎರಡಡಿ ಅಗಲದ ನೆಲವು ಖಾಲಿಯಾಗಿತ್ತು. ನನಗೆ ಆಶ್ಚರ್ಯವಾಯಿತು. ಕೋಣೆಯ ಹೊರಗೆ ನೋಡಿದೆ. ಶೂನ್ಯ....ಅಂಗಳಕ್ಕಿಳಿದೆ....ಇರಲಿಲ್ಲ....ಅಲ್ಲಿಯೂ ಇಲ್ಲ. ಬೀದಿಯ ವರೆಗೆ ಹೋದೆ.... ಆತನ ಪ್ರೇತವೂ ಇರಲಿಲ್ಲ. ಅಮೇರಿಕದ ಧನಿಕರನ್ನು ಹಿಡಿಯುವ ಮನುಷ್ಯಾಪಹಾರಿಗಳ ಕತೆಯು ನೆನಪಿಗೆ ಬಂದು ಒಮ್ಮೆ ಗಾಬರಿಗೊಂಡೆ. ಮತ್ತೆ ತೋರಿತು. ಈ ಮನುಷ್ಯನನ್ನು ಯಾರೇಕೆ ಅಪಹರಿಸುತ್ತಾರೆ? ಇವನಿಗೆ ಈ ಪ್ರಪಂಚದಲ್ಲಿರುವ ಸೊತ್ತೆಂದರೆ ಒಂದು ಮೆಳ್ಳೆಗಣ್ಣು ಮಾತ್ರ....ಇದಕ್ಕಾಗಿ ಈ ಪ್ರಾಣಿಯನ್ನು ಅಪಹರಿಸುವವರುಂಟೆ? ಇಷ್ಟೆಲ್ಲ ಆಲೋಚನೆ ತಲೆಗಡರುವಾಗ ನನ್ನ ಎಡಗಡೆ ಹತ್ತಡಿ ದೂರದಲ್ಲಿ "ತಟಪಟ ತಟಪಟ" ಎಂದೋಡುವ ಜಟಕ ಗಾಡಿಯ ಸದ್ದು ಕೇಳಿಸಿತು. ಮೋಹನನಿಗೂ ಅದಕ್ಕೂ ಸಂಬಂಧವೇನಿದ್ದೀತು? ಆದರೂ ಆ ಕಡೆಗೆ ಕಣ್ಣು ಹರಿಯಿಸಿದೆ. ಒಳಗಡೆ ಕುಳಿತ ವ್ಯಕ್ತಿ ಕೈಯೆತ್ತಿ ಗಾಡಿಯವನಿಗೆ ಬೇಗ ಹೊಡೆ ಎಂದು ಕೊಡುವ ಸನ್ನೆ ಮಾತ್ರ ಛಾಯಾರೂಪವಾಗಿ ಗೋಚರಕ್ಕೆ ಬಂತು. ಜಟಕದಲ್ಲಿ ಯಾರು ಸವಾರಿಮಾಡಬಾರದು? ಯಾರು ಸನ್ನೆಮಾಡಬಾರದು? ಈ ಘಂಟೆಗೆ ಇಷ್ಟು ಅವಸರದಿಂದ ಯಾರೋ ಒಬ್ಬ ಪ್ರಯಾಣಿಕನು ಉಗಿಬಂಡಿಯ ನಿಲ್ದಾಣಕ್ಕೆ ಓಡುತ್ತಿದ್ದರೆ ಅವನನ್ನೆ ಮೋಹನರಾಯನೆಂದು ಭಾವಿಸಿ ಓಡಿ ಹುಡುಕುವ ಸಾಹಸ ಮಾಡುವುದರಲ್ಲಿ ಏನು ಸಭ್ಯತೆಯಿದೆ? ಎಂತಹ ಜಾಣತನವಿದೆ? ಬೆಳಕಾಗಲಿ....ಎಲ್ಲ ತಿಳಿದುಬರುತ್ತದೆ....ಎಂದು ಕೋಣೆಯ ಕಡೆಗೆ ಹೆಜ್ಜೆ ತಿರುಗಿಸುತ್ತೇನೆ....ನಮ್ಮ ಭವನದ ಯಜಮಾನರು "ಕಳ್ಳರೋ

ಕಳ್ಳರು!" ಎಂದು ಮೂರನೆಯ ಸ್ಥಾಯಿಯಲ್ಲಿ ಕೂಗುತ್ತಿದ್ದುದು ಕಿವಿಗೆ ಬಿತ್ತು. ಹೀಗೆ ಬೊಬ್ಬಿಡುತ್ತಾ ನನ್ನ ಕೋಣೆಯ ಕಡೆಗೆ ಓಡಿ ಬಂದರು. "ಕಳ್ಳರಲ್ಲವಯ್ಯ. ನಾನು.... ನಾನು...." ಎಂದು ಅವರನ್ನು ಸಮಾಧಾನ ಪಡಿಸುವುದಕ್ಕೆ ಪ್ರಯತ್ನಿಸಿದೆ. "ಬೆಳಗ್ಗೆ ನೋಡುತ್ತೇನೆ.... ಪೆಟ್ಟಿಗೆಯ ಬೀಗ ಮುರಿದಿದೆ.... ಐನೂರು ರೂಪಾಯಿ.... ಹುಡುಕಿರಿ.... ಹುಡುಕಿರಿ.... ಹೋಯಿತೋ........ ಹೋಯಿತು" ಊರಿಗೇ ಪ್ರಳಯವಾದಂತೆ ಬೊಬ್ಬೆ ಹೊಡೆದ ಶ್ರೀನಿವಾಸಯ್ಯ. ನನಗೆ ಏನೆಂದೂ ತಿಳಿಯಲಿಲ್ಲ; ಸದ್ಯಕ್ಕೆ ತಿಳಿವ ಹಾಗೂ ಇರಲಿಲ್ಲ. ಹೀಗಿದ್ದರೂ ಅವರಲ್ಲಿ ಸಹಾನುಭೂತಿ ತೋರಿಸಬೇಡವೆ.... ಅವರು ಓಡಿದಲ್ಲಿ ಓಡಿದೆ; ನಿಂತಲ್ಲಿ ನಿಂತೆ.... ನಡುನಡುವೆ ಅಯ್ಯೊ........ ಏನನ್ಯಾಯ........ ಹೀಗೂ ಆಗುವುದೆಂದರೆ ........ ಎಂದು ವ್ಯಸನೋದ್ಗಾರ ಮಾಡಿದೆ. ಇನ್ನಷ್ಟು ಶ್ರದ್ಧೆಯಿಂದ ಶ್ರೀನಿವಾಸಯ್ಯನ ಕಷ್ಟದಲ್ಲಿ ನಾನು ಸಹಭಾಗಿಯಾಗಬಹುದಿತ್ತು. ಆದರೆ ನನ್ನ ಕೋಣೆಯಿಂದ ಮೋಹನ ಅದೃಶ್ಯನಾದುದೂ ಶ್ರೀನಿವಾಸಯ್ಯನ ಪೆಟ್ಟಿಗೆಯೊಳಗಿಂದ ಹಣ ಕಾಣೆಯಾದುದೂ ಶುಭಸಂಧಿಯಾಗಿರಲಿಲ್ಲ. ಇದೇ ನನ್ನ ಮನಸ್ಸನ್ನು ಕುಲುಕಿಸಿತ್ತು. ಬೊಬ್ಬಿಡುವಷ್ಟು ಬೊಬ್ಬಿಟ್ಟು ಹುಡುಕುವಷ್ಟು ಹುಡುಕಿ, ನಿಷ್ಫಲವಾದ ಮೇಲೆ, ಶ್ರೀನಿವಾಸಯ್ಯ, ಪೋಲೀಸು ಕಚೇರಿಗೆ ತಿಳಿಸಿದ. ಪೋಲೀಸರು ಬಂದರು.

ರೂಪಾಯಿ ಸಂಗ್ರಹವಾದ ಮತ್ತು ಅದೃಶ್ಯವಾದ ಕತೆಯಿದು: ಭವನದ ಯಜಮಾನ ಶ್ರೀನಿವಾಸಯ್ಯ ತನ್ನ ಕಟ್ಟಡದ ಬಾಡಿಗೆ ಕೊಡುವುದಕ್ಕಾಗಿ ಐನೂರು ರೂಪಾಯಿಗಳನ್ನು ಪೆಟ್ಟಿಗೆಯಲ್ಲಿ ಕೂಡಿಟ್ಟಿದ್ದನಂತೆ "ರುಪಾಯಿಯೆಂದರೆ ಗಾಳಿಯಲ್ಲಿ ಹಾರುವ ಕರೆನ್ಸಿ ನೋಟುಗಳಲ್ಲವಯ್ಯ! ಬಿಳಿ ನಾಣ್ಯಗಳು!" ಎಂದು ಹೇಳಿ ಆತ ತನ್ನ ಹಣದ ವಿಶೇಷ ಗುಣಗಳನ್ನು ತಿಳಿಸಿದ. ಅಲ್ಲಿ ನೆರೆದಿದ್ದವರಲ್ಲಿ ಮೋಹನರಾಯನೊಬ್ಬ ಇರಲಿಲ್ಲ. "ಎಲ್ಲಿದ್ದಾರೆ ನಿಮ್ಮ ಜೊತೆಗಾರರು?" ಎಂದು ನನ್ನಲ್ಲಿ ಕೇಳಲಾಯಿತು.

"ಅವರನ್ನೆ ಹುಡುಕುತ್ತಿದ್ದೇನೆ" ಎಂದು ನನ್ನ ಒಳದನಿಯ ಉತ್ತರ.

ಶ್ರೀನಿವಾಸಯ್ಯ: "ಅವನ ಮುಖ ನೋಡಿದ ದಿನವೆ ನನಗೆ ಸಂದೇಹವಾಗಿತ್ತು."

ನಾನು: "ಮೋಹನರಾಯನ ಮೇಲೆ ಅಪವಾದ ಹೇಳುತ್ತೀರಾ?"

ಶ್ರೀನಿವಾಸಯ್ಯ: ಅಪವಾದವಲ್ಲಯ್ಯ! ಸಂದೇಹ....ಆತ ಪ್ರತಿಯೊಂದು ವಿಷಯಕ್ಕೂ ಮೂತಿ ಹಾಕಿ ಮೂಸಿ ನೋಡುವ ಸ್ವಭಾವದವ.

ನಾನು: ಅದುದರಿಂದ ಆತನೇ ಕಳ್ಳ!

ಶ್ರೀನಿವಾಸಯ್ಯ: ನನ್ನ ಹಣ ಪೆಟ್ಟಿಗೆಯಲ್ಲಿದ್ದುದು, ನಾನು ಬೀಗದ ಕೈಯಿಡುವ ಸ್ಥಳ,—ಎಲ್ಲ ಆತನಿಗೆ ಗೊತ್ತು.

ನಾನು: ನನಗೂ ಗೊತ್ತು; ಹಾಗಿದ್ದರೆ ನಾನು ಕಳ್ಳನೇ?

ಶ್ರೀನಿವಾಸಯ್ಯ: ಅವನಷ್ಟು ಅಧಿಕ ಪ್ರಸಂಗ ನಿಮಗೆ ಅಭ್ಯಾಸವಾಗಲಿಲ್ಲವಲ್ಲ; ಇಷ್ಟು ಸಮಯದ ಸಹವಾಸದಿಂದಲೂ ಆಗಲಿಲ್ಲ.

ಈ ಮಾತು ಮರ್ಮಕ್ಕೆ ತಾಗಿತು. "ಅವನು ಹಣ ಕದ್ದಿದ್ದರೆ ನಾನು ಕೊಡುತ್ತೇನೆ!" ಎಂದು ಉದ್ವೇಗದಿಂದ ಆಡಿದೆ.

"ಅಷ್ಟಾದರೆ ಸರಿ; ನನ್ನ ಯೋಚನೆ, ಎಲ್ಲ ಹೋಯಿತು" ಎಂದು ಶ್ರೀನಿವಾಸಯ್ಯ ಹಸನ್ಮುಖನಾಗಲು ಯತ್ನಿಸಿದ.

ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ಪೊಲೀಸರು ನನ್ನ ಕೋಣೆಯನ್ನು ಸಂದರ್ಶಿಸಲು ಅಪೇಕ್ಷಿಸಿದರು. ಮೇಲೆ ಹೋದೆವು; ನೋಡುವುದೇನನ್ನು? ಹಸಿದ ಬಡವನ ಬಾಯಿಯಂತೆ ಆಗಲವಾಗಿ ತೆರೆದಿದ್ದ ನನ್ನ ಪೆಟ್ಟಿಗೆಯನ್ನು ಕಂಡು ಒಮ್ಮೆಗೆ ಜೀವ ಹಾರಿತು. ಪೆಟ್ಟಿಗೆ ಬರಿದು; ಸಂಪೂರ್ಣವಾಗಿ ಬರಿದಾಗಿತ್ತು; ಎಂದರೆ ಅಸತ್ಯವಾದೀತು. ಬಡವರಿಗೆ ಕೊಡಲೆಂದು ತೆಗೆದಿಟ್ಟಿದ್ದ ಎರಡು ಹಳೆ ಅಂಗಿಗಳು; ಮೂರು ಪಂಚೆಗಳು; ಬಡವರಿಗಾಗಿಯೆ ಉಳಿದಿದ್ದುವು. ಅಕಾಲದಲ್ಲಿ ಕಡಿದರೆ ಧರಿಸಿಕೊಳ್ಳುವುದಕ್ಕಾಗಿ ಕಾದಿಟ್ಟಿದ್ದ "ರಿಜರ್ವ್" ಯಜ್ಞೋಪವೀತಗಳು ಎರಡು. ಹಳತಾದ ಸಾಬೂನಿನ ಪೆಟ್ಟಿಗೆಯೊಂದು; ಇವಲ್ಲದೆ ಉಳಿದ ಎಲ್ಲ ಒಡವೆಗಳು ಮಾಯವಾಗಿದ್ದುವು! ಹೊಸತಾಗಿ ಮಡಿವಾಳನ ಮನೆಯಿಂದ ಬಂದಿದ್ದ ಅಂಗಿಗಳು; ಮುಂಗೈ ಗಡಿಯಾರ; ಬಂಗಾರದ ಮಿರುಗಿನ ಗುಂಡಿಗಳು; ಒಂದು ಸುಗಂಧ ತೈಲದ ಕುಪ್ಪಿ. ಇನ್ನೊಂದು ಫೌಂಟನ್ ಪೆನ್ನು; ಇಷ್ಟು ಒಂದು ಪೆಟ್ಟಿಗೆಯಲ್ಲಿರಲಿಲ್ಲ. ಮತ್ತೊಂದರಲ್ಲಿ ಒಂದು ರೇಶ್ಮೆಯ ಶಾಲು; ಇದನ್ನು ನಲುವತ್ತು ರೂಪಾಯಿಗೆ ಕೊಂಡಿದ್ದೆ. ಸ್ವದೇಶದ ಕೈಗಾರಿಕೆಯ ಹಿರಿಮೆಯನ್ನು ಎತ್ತಿ ತೋರಿಸುವುದಕ್ಕಲ್ಲದೆ, ಬೇರೆ ಯಾವ ಪ್ರಯೋಜನಕ್ಕೂ ಈ ಖಾದಿ ಶಾಲನ್ನು ಗಳಿಸಿ

ದವನು ನಾನಲ್ಲ. ಇನ್ನು ಕೆಲ ಸಾಮಾನುಗಳನ್ನು ಇಟ್ಟಿದ್ದೆ; ಆಪದ್ಧನ ಎಂದು ನೂರು ರುಪಾಯಿಗಳ ನೋಟುಗಳನ್ನು ಜತನದಿಂದ ಇಟ್ಟಿದ್ದೆ. ಶ್ರೀನಿವಾಸಯ್ಯನ ಹಣದಂತೆ ನನ್ನದೂ ಬಿಳಿ ನಾಣ್ಯದ ರೂಪದಲ್ಲಿರಲಿಲ್ಲ ಎಂಬುದನ್ನು ಒಪ್ಪಬಹುದು. ಆದರೆ ಅವನ ನೂರು ನಾಣ್ಯಗಳಷ್ಟೆ ನನ್ನ ನೂರರ ನೋಟಿಗೂ ಬೆಲೆಯಿದೆ ಎಂಬುದನ್ನು ಅಲ್ಲಗಳೆಯಬಹುದೆ? ಈ ವಸ್ತುಗಳಲ್ಲಿ ಒಂದಾದರೂ ಇರಲಿಲ್ಲ. ನೋಡಿ ಬೆಪ್ಪನಾಗಿ ನಿಂತೆ. ಮನಸ್ಸಿನಲ್ಲಿ ಗಲಿಬಿಲಿಯಾಯಿತು. ಶ್ರೀನಿವಾಸನಲ್ಲಿ ಹಾಗಾಯಿತು; ನನ್ನ ಕೋಣೆಯಲ್ಲಿ ಹೀಗಾಯಿತು. ಮೋಹನರಾಯ ಎಲ್ಲಿಯೋ ಗಾಳಿ ಯಲ್ಲಿ ಎದ್ದು ಮಾಯವಾಗಿದ್ದಾನೆ. ಇಷ್ಟೆಲ್ಲ ಘಟನೆಗಳು ಏಕಕಾಲದಲ್ಲಿ ಘಟಿಸುವುದು ಹೇಗೆ? ಒಂದಕ್ಕೊಂದು ಹೊಂದಿಕೊಂಡಂತಿದೆಯಲ್ಲ! ಏನು ಮಾಡೋಣ? ಯಾರನ್ನು ದೂರೋಣ?

''ಇನ್ನೂ ರಾಯರಿಗೆ ಸ್ನೇಹಿತರಲ್ಲಿ ಅವಿಶ್ವಾಸವಿಲ್ಲ" ಎಂದು ಪೋಲೀಸನು ಅಪಹಾಸ್ಯ ಮಾಡುವವನಂತೆ ನಕ್ಕು ತನಗರಿತುದನ್ನು ಹೇಳಿದ: ಯಾವನೋ ಒಬ್ಬ ದೊಡ್ಡ ಮೋಸಗಾರ ಪೋಲೀಸರನ್ನು ತಪ್ಪಿಸಿ ಜನರನ್ನು ಸುಲಿಯುತ್ತಿದ್ದಾನೆ. ಹುಬ್ಬಳ್ಳಿಯಲ್ಲಿ ಜಗದೀ ಶಯ್ಯನೆಂಬ ಒಬ್ಬ ಭಾರಿ ಜನ. ಉದ್ಯೋಗ ಸಂಪಾದನೆ ಸಮಿತಿಯೊಂ ದನ್ನು ರಚಿಸಿ ಎರಡು ವರ್ಷ ಹತ್ತೆಂಟು ಸಾವಿರವನ್ನು ಸಂಗ್ರಹಿಸಿ ಒಂದು ದಿನ ಸುಪ್ರಭಾತದಲ್ಲಿ ಅದೃಶ್ಯನಾಗಿದ್ದ. ಬೊಂಬಾಯಿಯಲ್ಲಿ ''ಕುಬೇರ ನಿಧಿ"ಯೊಂದು ತಲೆಯೆತ್ತಿ ಆರು ತಿಂಗಳಲ್ಲಿ ತಲೆ ಮರೆಸಿತು. ಬೆಂಗ ಳೂರಲ್ಲಿ ಪರೋಪಕಾರ ಸಂಸ್ಥೆಯೊಂದು ಪರೋಪಕಾರಕ್ಕೆ ತೊಡಗಿ ಇಪ್ಪ ತ್ತೈದು ಸಾವಿರದೊಂದಿಗೆ ಅಡಗಿಹೋಯಿತು. ಇದೆಲ್ಲ ಒಬ್ಬ ವ್ಯಕ್ತಿಯ ಕೈವಾಟವೆಂದು ಅಧಿಕಾರಿಗಳ ಗಮನಕ್ಕೆ ಬಂದು ಒಳಗೊಳಗೆ ಶೋಧನೆ ನಡೆಯುತ್ತಿದೆ. ನಾಲ್ಕಾರು ಹೆಸರುಗಳುಳ್ಳ ಈ ವ್ಯಕ್ತಿಗೆ ಒಂದೇ ಮುಖ ವೆಂದೂ, ಮೆಳ್ಳೆಗಣ್ಣುಗಳೆಂದೂ, ಕರಿಯ ಬಣ್ಣವೆಂದೂ, ಹೊಡೆವ ನಾಲಗೆ ಯೆಂದೂ ತಿಳಿದಿದೆ; ನಮ್ಮೂರಲ್ಲಿಯೂ ಅವನ ಶೋಧನೆ ನಡೆಯುತ್ತಿದೆ. ನಿನ್ನೆ ಅಂತಹದೊಂದು ವ್ಯಕ್ತಿ ಮಂಗಳೂರಿನ ಮೈದಾನಿನಲ್ಲಿ ಗೋಚರಕ್ಕೆ ಬಂತು. ಗುಪ್ತಚಾರರು ಹೊಂಚುಹಾಕುತ್ತಿದ್ದರು. ಹೇಗೋ ತಪ್ಪಿಸಿ ಕೊಂಡು ಓಡಿಬಿಟ್ಟ....ಇನ್ನು ಹೆಚ್ಚಿನ ಕತೆ ಹೇಳಬೇಕೆಂಬ ಆಶೆಯಿರ ಲಿಲ್ಲ. ನನಗೂ ಶಂಕೆಯಾಯಿತು; ಉಭಯ ಸಂಕಟವಾಯಿತು.

ಇಷ್ಟು ಕಾಲ ನನ್ನೊಡನೆ ಪ್ರಾಚೀನ ಕರ್ಮದಂತೆ ಸುಳಿದಿದ್ದಾನೆ. ನನ್ನನ್ನೊಬ್ಬನನ್ನೆ ಮಿತವಾಗಿ ಸ್ತುತಿಸಿದ್ದಾನೆ. ನಮ್ಮ ಗೆಳೆತನವನ್ನು, ಶ್ರೀನಿವಾಸಯ್ಯ ಹಗಲಿರುಳು ಕಂಡಿದ್ದಾನೆ. ಸದಾನಂದ ವಿಲಾಸದ ಪ್ರತಿಯೊಂದು ಲೋಟಿಗೂ ನಮ್ಮಿಬ್ಬರ ಸಮೀಪದ ಪರಿಚಯವಿದೆ. ಜವಳಿ ವ್ಯಾಪಾರಿ ತಮ್ಮಣ್ಣನಾಯಕರು ಕಟ್ಟಿ ಕಳುಹಿಸಿದ ಬಟ್ಟೆಯ ಮೂಟೆ— ನಮ್ಮಿಬ್ಬರ ಗಾಢಸ್ನೇಹದ ಮುಡಿಪಾಗಿತ್ತು. ಇಂತಹ ಒಬ್ಬ ಸಂಗಡಿಗನನ್ನು ಕಳ್ಳನೆಂದು ಇತರರು ಹೇಳಿದರೆ, ನನಗೆ ಸಂದೇಹವಾದರೂ ಅದನ್ನು ಒಪ್ಪಿಕೊಂಡರೆ, ನನ್ನ ವಿವೇಕಕ್ಕೆ ಬೆಲೆಯೇನು? ನನಗೇನು ಮರ್ಯಾದೆ? ಸದ್ಯಕ್ಕೆ ಆವನನ್ನು ಬಯಲಿಗೆಳೆಯದಿದ್ದರೆ ಮಾತ್ರ ನನ್ನ ಮರ್ಯಾದೆಯುಳಿದೀತೆಂಬ ಬುದ್ಧಿಯನ್ನು ದೇವರು ನನಗೇಕೋ ಕೊಟ್ಟುಬಿಟ್ಟ.

ನಾನು ಪೋಲೀಸರಲ್ಲಿ ಮನವಿಮಾಡಿಕೊಂಡೆ: "ನಿಮಗೆ ಎಂತಹ ಸಂದೇಹವೂ ಇರಬಹುದು. ನನಗೆ ಆತನಲ್ಲಿ ಅವಿಶ್ವಾಸವಿಲ್ಲ. ನನ್ನಲ್ಲಾದ ಕಳವಿಗೆ ಆತನು ಕಾರಣವಲ್ಲ; ಆತ ಬರುವ ಮುಂಚೆ ಎಷ್ಟೋ ಬಾರಿ ಹೀಗಾದುದುಂಟು; ನಾನು ಬಹಳ ಅಜಾಗರೂಕ; ತಕ್ಕ ಫಲ ದೊರೆಯಿತು. ನಾನಂತೂ ಆರೋಪಣೆ ಮಾಡಲಾರೆ. ಶ್ರೀನಿವಾಸಯ್ಯನ ದೂರು! ಅದಕ್ಕೆ ನಾನು ಕಾರಣನಲ್ಲದಿದ್ದರೂ, ಆವನ ಬಾಯಿಯನ್ನು ಮುಚ್ಚಿಸುವ ಕೆಲಸ ನನ್ನದು. ನನ್ನ ಸ್ನೇಹಿತನೊಬ್ಬನನ್ನು ಹೆಡಮುರಿ ಕಟ್ಟಿ ಹಿಡಿದು ತಂದು ನ್ಯಾಯಸ್ಥಾನದ ಮುಂದೆ ನಿಲ್ಲಿಸಿದರೆ ನಾನು ಊರಲ್ಲಿರುವುದು ಹೇಗೆ? ಮೋಹನನಂತೆ ನಾನೂ ಪಲಾಯನ ಮಾಡಬೇಡವೆ? ಈ ಬಾರಿ ತನಿಖೆಯನ್ನಿಲ್ಲಿಗೇ ನಿಲ್ಲಿಸಬಹುದು; ಕಳವಿನ ತುಬ್ಬಾಗಲಿಲ್ಲ. ಎಂದೇಕೆ ಭಾವಿಸಬಾರದು......?" ಎನ್ನುತ್ತಾ ಕೈಯನ್ನು ಜೇಬಿಗೆ ತುರುಕಿಸಿ ಹಣದ ಚೀಲದ ಧ್ವನಿಯಾಗುವಂತೆ ಮಾಡಿ ಪೋಲೀಸನನ್ನು ದೂರಕ್ಕೆ ಕರೆದೆ. ಅಂದು ಹೋದ ಪೋಲೀಸನು ಮತ್ತೆ ಮುಖ ತೋರಿಸಲಿಲ್ಲ.

*     *     *     *

ಮೋಹನರಾಯನ ದೆಸೆಯಿಂದ ನನಗೂ ಅಪೂರ್ವ ಪ್ರಖ್ಯಾತಿ ಬಂದಿತೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಈ ಸಂಗತಿಯನ್ನು

ಗುಟ್ಟಾಗಿರಿಸಬೇಕೆಂದು ಎಲ್ಲರಲ್ಲಿಯೂ ಬಿನ್ನವಿಸಿಕೊಂಡಿದ್ದೆ. ಶ್ರೀನಿವಾಸಯ್ಯ ಎಲ್ಲರಲ್ಲಿಯೂ ಗುಟ್ಟಾಗಿಯೇ ಇದನ್ನು ತಿಳಿಸಿದ್ದ. "ಮಹಾರಾಯ! ನಿನಗೆ ಮಾತ್ರವಲ್ಲ; ನನಗೂ ನಷ್ಟವಾಗಿದೆ. ನಿನ್ನ ಐನೂರು ರುಪಾಯಿಗಳಲ್ಲಿ ನನ್ನ ಅನ್ನದ ಲಾಭ ಎಷ್ಟಾಗದು ನೋಡಿಕೊ...ಗಿರಾಕಿಗಳಲ್ಲಿ ದುರಾರೋಪಣೆ ಮಾಡಬೇಡ........ಮಾಡಿದರೆ ಯಾರು ನಿನ್ನ ಕೂಳು ತಿನ್ನುವುದಕ್ಕೆ ಬಂದಾರು? ನಿನ್ನ ನಷ್ಟದಲ್ಲಿ ನಿನಗರ್ಧ, ನನಗರ್ಧ........"ಎಂದು ಹಲವು ದಿನ ವಾದಿಸಿ ಆತನ ಬಾಯಿಯನ್ನು ಮುಚ್ಚಿಸಿದೆ. ಇಷ್ಟರಲ್ಲಿ ಹಲವರು ನನಗೂ ತಮಗೂ ಇದ್ದ ಲೆಕ್ಕಾಚಾರ ಏನೆಂಬುದನ್ನು ಹುಡುಕ ತೊಡಗಿದರೆಂದು ತೋರುತ್ತದೆ. ನನ್ನ ದುರ್ದೈವದಿಂದ ಆಗ ತಾನೇ ಧನಲಕ್ಷ್ಮೀ ಪೂಜೆಯೂ ಬಂತು. ಧನಲಕ್ಷ್ಮಿ ನನಗೆ ಕೋಟಲೆಯನ್ನೇ ಕೊಟ್ಟಳು. ಜವಳಿ ವ್ಯಾಪಾರಿ ತಮ್ಮಣ್ಣನಾಯಕರು ಹಿಂದಿನಂತೆ, ಮುಂಚಿನ ದಿನವಲ್ಲ; ಎಷ್ಟೋ ದಿನಗಳ ಪೂರ್ವದಲ್ಲಿಯೇ ನನಗೆ ಆಮಂತ್ರಣ ಕಳುಹಿಸಿಕೊಟ್ಟರು. ನನ್ನ ಲೆಕ್ಕ ಬಾಕಿ ಇಲ್ಲದಿದ್ದ ಕಾಲದಲ್ಲಿ ಪೂಜೆಯ ಹಿಂದಿನ ದಿನ ಬರುತ್ತಿದ್ದ ಆಮಂತ್ರಣ ಪತ್ರಿಕೆ ಎರಡು ವಾರಗಳ ಹಿಂದೆಯೇ ಹಾಜರಿ ಕೊಟ್ಟಿತ್ತು. ಜವಳಿ ವ್ಯಾಪಾರಿ ತಮ್ಮಣ್ಣನಾಯಕ, ನನ್ನ ಸಹಪಾಠಿ ನಾಯಕ, ತನ್ನ ಅಂಗಡಿ ಪೂಜೆಗೆ ನಾನು ಹೋಗಬೇಕೆಂದೂ, ಎಂದಿನಂತೆ, ತಾಂಬೂಲ ಸ್ವೀಕಾರ ಮಾಡಿ, ಆತನ ಮನಸ್ಸನ್ನು "ಹರ್ಷಿಸ"ಬೇಕೆಂದೂ ಅಪೇಕ್ಷಿಸಿದ್ದ. ಬೆಲೆಯಿಲ್ಲದ ತಾಂಬೂಲ ಸ್ವೀಕಾರವಾಗಿದ್ದರೆ ನಾನು ಹೋಗುತ್ತಲೇ ಇರಲಿಲ್ಲ. ಇದುವರೆಗೂ ತಾಂಬೂಲದ ಆಸೆಯಿಂದ ಹೋದ ಜನ ನಾನಲ್ಲ. ಈ ಬಾರಿಯ ತಾಂಬೂಲ ಒಳ್ಳೆಯ ಬೆಲೆಯುಳ್ಳದ್ದು.... ಮುದ್ರಿತಾಕ್ಷರಗಳ ಕೆಳಗೆ "ನಿಮ್ಮಿಂದ ಬಹ ಐವೇಜು ೧೫೦ (ನೂರ ಐವತ್ತು ರುಪಾಯಿಗಳು)" ಎಂದು ಅಕ್ಷರದಲ್ಲಿಯೂ ಅಂಕೆಯಲ್ಲಿಯೂ ಕಣ್ಣಿಗೂ ಮನಸ್ಸಿಗೂ ಸರಿಯಾಗಿ ನಾಟುವಂತೆ, ವ್ಯಾಪಾರಿಗಳ ಮೋಡಿ ಬರಹದಲ್ಲಿ ಬರೆದ ಪಂಕ್ತಿಯನ್ನೋದಿ ಬೆಚ್ಚಿಬಿದ್ದೆ!

ನೂರ ಐವತ್ತು ರುಪಾಯಿಗಳು! ರುಪಾಯಿಗೆ ತುಂಬ ಬೆಲೆಯಿದ್ದ ಕಾಲದಲ್ಲಿ ಇಷ್ಟರಿಂದ ಏನು ಮಾಡುವುದಕ್ಕೆ ಸಾಧ್ಯವಿಲ್ಲ? ಐನೂರು ಜನರಿಗೆ ಬ್ರಹ್ಮಸಂತರ್ಪಣೆ ಮಾಡಬಹುದು. ಒಂದುವರೆ ಕೋರ್ಜಿ

ಅಕ್ಕಿ ದೊರೆಯಬಹುದು; ಒಂದು ವರ್ಷ ಬಾಡಿಗೆ ಕೊಟ್ಟು ದೊಡ್ಡ ಬಂಗಲೆಯಂತಹ ಕಟ್ಟಡದಲ್ಲಿ ರಾಜಠೀವಿಯಿಂದ ವಾಸಿಸಬಹುದು. ನೆಟ್ಟನೆ ಕಾಶೀ ಕ್ಷೇತ್ರಕ್ಕೆ ಪ್ರಯಾಣಮಾಡಿ ಮರಳಬಹುದು; ಗಂಡ ಹೆಂಡತಿ ಇಬ್ಬರೆ ಇರುವ ಚಿಕ್ಕ ಕುಟುಂಬದ ಆರು ತಿಂಗಳ ವೆಚ್ಚವನ್ನು ನಿರ್ವಹಿಸಬಹುದು. ಇಷ್ಟು ಹಣವನ್ನು ನಾನು ಕೊಡಬೇಕು ನಾಯಕನಿಗೆ! ಕೊಟ್ಟು ಆತನನ್ನು ಹರ್ಷಗೊಳಿಸಬೇಕು. ಆತ ಹರ್ಷಪಡಲಿ; ಅಥವಾ ಸಿಟ್ಟಿನಿಂದ ಹುಚ್ಚಾಗಿ ರಸ್ತೆ ರಸ್ತೆಯಲ್ಲಿ ಕುಣಿದಾಡಲಿ; ಒಂದು ಕಾಸನ್ನೂ ಕೊಡಲಾರೆ ಎಂಬ ಮಹಾಪ್ರತಿಜ್ಞೆಮಾಡಿ ಅದೇ ದಿನ ನಾಯಕನನ್ನು ಕಂಡು ಆಮಂತ್ರಣಪತ್ರವನ್ನೆತ್ತಿ ಅವನ ಮುಖಕ್ಕೆ ಹಿಡಿದು "ಇದರ ಅರ್ಥವೇನಯ್ಯ!" ಎಂದು ಕೆಂಡದಂತಹ ಸಿಟ್ಟಿನಿಂದ ಕೇಳಿದೆ.

ನಾಯಕ ಸಿಟ್ಟಾಗಲಿಲ್ಲ. "ಕುಳಿತುಕೊಳ್ಳಿ" ಎಂದು ಕುರ್ಚಿಯನ್ನು ಕೊಟ್ಟ. ಕಾಫಿ ತರಿಸಲೆ? ಎಂದು ಪ್ರಶ್ನೆ ಹಾಕುತ್ತ ನನ್ನ ಉತ್ತರವನ್ನು ಕೇಳುವ ಮುಂಚೆ ಕೆಲಸದವನನ್ನು ಕಳುಹಿಸಿಕೊಟ್ಟ. ನಾನು ಸಿಡಿಯುತ್ತಿದ್ದೆ. ಆತ ಸ್ವಲ್ಪ ಕಾಲ ಮೌನವಾಗಿಯೇ ಇದ್ದು ಬಂದ ಗಿರಾಕಿಗಳನ್ನು ಕಳುಹಿಸಿಕೊಟ್ಟ ಮೇಲೆ "ಇದು ನಿಮ್ಮ ಜೊತೆಗಾರರು.... ನೋಡಿ ಆ ಜನ....ಹೆಸರೇ ಮರೆತುಹೋಯಿತು....ಬಣ್ಣ ಕಪ್ಪು. ತುಂಬ ಮಾತಾಡುತ್ತಾರೆ....ಆ ಜನ....ತೆಗೆದುಕೊಂಡ ಬಟ್ಟೆಬರೆಗಳ ಕ್ರಯ...."

"ಒಬ್ಬನು ಕೊಂಡ ವಸ್ತುವಿಗೆ ಇನ್ನೊಬ್ಬ ಬೆಲೆಕೊಡುವುದೆಂದರೆ ಲೋಕಕ್ಕೆ ಅನ್ಯಾಯವಲ್ಲವೆ; ಇದರರ್ಥವೇನು?" ಎಂದು ನಾನು ಕೇಳಿದೆ.

"ಒಂದು ರೀತಿಯಲ್ಲಿ ಅನ್ಯಾಯ ಹೌದು. ಇನ್ನೊಂದು ರೀತಿಯಲ್ಲಿ ನ್ಯಾಯವೂ ಹೌದು. ನನಗೆ ಬರಬೇಕಾದ ಹಣ ವಸೂಲಿಯಾಗಬೇಕಾದುದು ನ್ಯಾಯವಲ್ಲವೆ?"

"ನ್ಯಾಯ; ಅವನ ಕೈಯಿಂದ ವಸೂಲಿಯಾಗಬೇಕು."

"ಅವನ ಕೈಯಲ್ಲಿರುವುದು ಬರೇ ಐದು ಬೆರಳುಗಳು ಮಾತ್ರ; ಎಂದಾದರೆ?"

"ಅದಕ್ಕೆ ನಾನು ಹೊಣೆಯೇ?"

"ನನಗೆ ನಿಮ್ಮಂತಹ ಸ್ನೇಹಿತರು ಒಬ್ಬರಲ್ಲ; ನೂರು ಮಂದಿ; ಪ್ರತಿಯೊಬ್ಬರೂ ಬಂದು, ತಮ್ಮ ಪರಿಚಿತರನ್ನು ಕರೆದುಕೊಂಡು ಬಂದು, ಅವರಿಗೆ ಬಟ್ಟೆಬರೆ ಕೊಡಿಸಿ, ಲೆಕ್ಕ ಬಾಕಿಮಾಡಿ ಹೋದರೆ........ಒಂದು ತಿಂಗಳೊಳಗೆ ನಮ್ಮ ಅಂಗಡಿ ದಿವಾಳಿಯಾಗದೆ?"

"ಅವನ ಸಾಲವನ್ನು ಅವನಿಂದಲೇ ವಸೂಲು ಮಾಡಿ."

"ಹೆಚ್ಚು ವಿಚಾರಿಸಿದರೆ ಅವನ ಸಾಲವೇ ಇಲ್ಲ........ಎಲ್ಲ ನಿಮ್ಮ ಹೆಸರಲ್ಲಿದೆ ನೋಡಿ........" ಎಂದು ಲೆಕ್ಕದ ಪುಸ್ತಕದ ಹಾಳೆಗಳನ್ನು ಮಗುಚಿ ನನ್ನ ಹೆಸರಲ್ಲಿಯೆ ಬರೆದಿದ್ದ ಸಾಲವನ್ನು ತೋರಿಸಿದ.

"ಹೀಗೆ ನನ್ನ ಹೆಸರಲ್ಲಿ ಬರೆಯಬೇಕೆಂದು ಹೇಳಿದವರು ಯಾರು?" ಎಂದು ಕೋಪಾವೇಶದಿಂದ ಕೇಳಿದೆ.

"ಯಾರೂ ಅಲ್ಲ; ಪ್ರಪಂಚದ ಅನುಭವ!"

"ನನ್ನ ಒಪ್ಪಿಗೆಯಿಂದ ಬರೆದಿರಾ?"

"ಕೈಕೈ ಹಿಡಿದುಕೊಂಡು ಅಣ್ಣತಮ್ಮಂದಿರಂತೆ ಬಂದಿರಿ; ನಿಮ್ಮ ಮುಂದುಗಡೆಯಲ್ಲಿಯೇ ಆತ ದುಡ್ಡಿಲ್ಲ, ಎಂದಿದ್ದ; ನಾನು ಮಾಡಿದುದೂ ಹಾಗೆಯೆ."

"ನನ್ನ ಮುಖ ನೋಡಿ ಅವನಿಗೆ ಸಾಲ ಕೊಟ್ಟುದಾದರೆ ದಾರಿಯಲ್ಲಿ ಹೋಗುವ ನಾಯಿಯ ಮುಖ ನೋಡಿ ಪಡೆದುಕೊಳ್ಳಿ."

"ದಾರಿಯ ನಾಯಿಗೂ ನಿಮಗೂ ಅವನಿಗೂ ಸಂಬಂಧವಾದರೂ ಏನಯ್ಯ?"

ಈ ಚುಚ್ಚು ಮಾತಿನಿಂದಲೂ, ಮಾತಿನ ಮೊನೆಗೆ ವಿಷವನ್ನು ಸವರಿದಂತೆ ಆತನ ತುಟಿಯಲ್ಲಿ ಮೂಡಿದ ಮುಗುಳು ನಗುವಿನಿಂದಲೂ ನನ್ನ ಎದೆ ಗಾಸಿಯಾಯಿತು. "ಸಾಧ್ಯವಿದ್ದರೆ ಪಡೆದುಕೊಳ್ಳಿ," ಎಂದು ದರ್ಪದಿಂದ ಆಡಿದೆ.

"ಸಾಧ್ಯವಲ್ಲದೆ ಏನು....ನನ್ನ ಲೆಕ್ಕ ಸುಳ್ಳೆಂದು ತೋರಿಸಲು ನಮ್ಮನ್ನು ಸೃಷ್ಟಿಮಾಡಿದ ಚತುರ್ಮುಖ ಬ್ರಹ್ಮನಿಗೂ ಸಾಧ್ಯವಲ್ಲ.... ಆದರೆ ಗಿರಾಕಿಗಳ ಮೇಲೆ ಸ್ನೇಹಿತರ ಮೇಲೆ ದಾವೆ ಹೂಡುವ ಅಭ್ಯಾಸ ಇಲ್ಲ....ಮಾಡುವುದೇನು....ಅಂತಹ ಸಂದರ್ಭ ಬಂದರೆ, ಇಲ್ಲದ ಅಭ್ಯಾಸಗಳನ್ನು ಹಚ್ಚಿಕೊಳ್ಳಬೇಕಾಗುತ್ತದೆ........ಕಲಿಯುಗವಪ್ಪ........

ಕಲಿಯುಗ....'' ಎಂದು ನಾಯಕ ಆಡಿದಾಗ ಕೆಲಸದ ಆಳು ಕಾಫಿ ಯನ್ನು ತಂದಿಟ್ಟ........ಕುಡಿಯಿರಿ ಭಟ್ಟರೆ........ಒಂದು ಕಪ್ಪು....” ಎಂದು ತಣ್ಣಗೆ ನನ್ನ ಕೈಯಲ್ಲಿಯೆ ಪಾತ್ರವನ್ನು ಕೊಟ್ಟ.

ನಮ್ಮ ವಿವಾದ ಹೇಗಿದ್ದರೂ, ಕಾಫಿ ನನಗೇನು ಅಪರಾಧಮಾಡಿದೆ? ಅದು ಹೊಟ್ಟೆಗೆ ತಲಪುವಷ್ಟರಲ್ಲಿ ಸ್ವಲ್ಪ ಶಾಂತತೆಯೂ ಉಂಟಾಯಿತು. ಏನು ಮಾಡಿದರೂ ನಾಯಕನಿಂದ ಬಿಡುಗಡೆಯಿಲ್ಲ, ಎಂದು ಭಾವಿಸಿ ಮತಿಗೆಟ್ಟು ಆಡುವುದರಲ್ಲಿ ಲಾಭವಿಲ್ಲವೆಂದು ತಿಳಿದು ''ನಾಯಕರೆ! ಸಾಧ್ಯವಾದರೆ ಆತನಿಂದಲೆ....” ಎನ್ನುವುದರೊಳಗೆ “ಸಾಧ್ಯವಾದರೆ ಆತನಿಂದಲೆ ವಸೂಲುಮಾಡೋಣ....ಸಾಧ್ಯವಾಗದಿದ್ದರೆ ಹೀಗೆ ಮಾಡ ಬೇಕಾದೀತು....ಎಂಬುದನ್ನಿಷ್ಟೆ ಕಾಗದದಲ್ಲಿ ತಿಳಿಸಿದೆ” ಎಂದು ನಾಯಕ ಉತ್ತರಕೊಟ್ಟ.

“ಸಾಧ್ಯವಿಲ್ಲವೆ?” ಎಂದು ನನ್ನ ಪ್ರಶ್ನೆ.

“ವಿಮಾನ ಹತ್ತಿ ಮೂರು ಲೋಕದಲ್ಲಿ ಹುಡುಕಿದರೂ ಆತನ ಪತ್ತೆ ಹಚ್ಚುವುದು ಕಷ್ಟ!”

“ಹಾಗಾದರೆ!”

''ಬೇರೇನೂ ಇಲ್ಲ. ನಿಮಗೆ ಇಷ್ಟಬಂದಂತೆ ಕೊಡಿ; ಕೈಯಲ್ಲಿ ಒದಗಿದಾಗ ಕಾಸಿನ ಲೆಕ್ಕದಲ್ಲಿ ಕೊಡಿ; ಅವನ ಹಣ ಹೇಗಾದರೂ ಬಂತೆಂದು ಬರೆಯುವಂತಾದರೆ ಸಾಕು. ಇಷ್ಟು ಮಾಡುತ್ತೇನೆ........ ಎಂದು ನೀವು ಮಾತುಕೊಟ್ಟರೆ ಸಾಕು....”

ಹತ್ತೆಂಟು ನಿಮಿಷ ಮುಖ ಕೆಂಪಗೆ ಮಾಡಿಕೊಂಡು ಅಲ್ಲಿಯೇ ಕುಳಿತೆ. ನಾಯಕ ನನಗೆ ಮಹಾ ವಿಪತ್ತನ್ನು ತಂದನೆಂದು ಮನಸ್ಸಿನಲ್ಲೆ ಹಲ್ಲುಗಳನ್ನು ಕಡಿಯುತ್ತಿದ್ದೆ.........ಇವು ಬರಿಯ ಮನಸ್ಸಿನ ಹಲ್ಲು ಗಳಷ್ಟೆ........ಏನು ಮಾಡಲಾಗುತ್ತದೆ? ನಾಯಕನ ತಪ್ಪಾದರೂ ಏನು? ನಾನೂ ಅವನೂ ಜೊತೆಯಾಗಿ ಬಾರದಿರುತ್ತಿದ್ದರೆ? ಬಂದಿದ್ದರೂ ಅವನ ಬಟ್ಟೆಗೆ ಅವನೇ ಬೆಲೆಕೊಡಬೇಕೆಂದು ತಿಳಿಸಿದ್ದರೆ? ಹೀಗೆಂದೂ ಆಗು ತ್ತಿರಲಿಲ್ಲ. ತಿಳಿಸದಿದ್ದ ತಪ್ಪು ನನ್ನದೇ. ಯಾಕೆ ತಿಳಿಸಲಿಲ್ಲ? ಬರಿಯ ಒಂದು ಆಡಂಬರಕ್ಕಾಗಿ........ನಾನಂತಹ ಸಭ್ಯನೆಂದು ಉದಾರನೆಂದು ತೋರಿಸುವುದಕ್ಕಾಗಿ.,.......ಮೋಹನನ ಮಿತ್ರವಾದ ಪ್ರಶಂಸೆಗೆ ಪ್ರತಿಫಲ

ವಾಗಿ........ನನ್ನ ಸ್ನೇಹಿತ ನನ್ನಷ್ಟೆ ಸಭ್ಯನೆಂಬುದನ್ನು ಕಾಣಿಸುವುದ ಕ್ಕಾಗಿ........ಅಂಥ ಮೋಸಗಾರನನ್ನು ಸ್ನೇಹಿತನನ್ನಾಗಿ ಮಾಡಿಕೊಂಡ ಮೇಲೆ, ನನ್ನ ಮತ್ತು ಮೋಹನನ ಸಂಬಂಧವೇ ನಾಯಕರ ವ್ಯವ ಹಾರಕ್ಕೆ—ಎಂದರೆ ಈಗ ಮೋಸವಾಗುವುದಿದ್ದರೆ ಅದಕ್ಕೂ ಕಾರಣ ವಾಯಿತು. ಕೊನೆಗೆ ತಪ್ಪೆಲ್ಲ ನನ್ನದೆ ಎಂಬ ಸಿದ್ಧಾಂತಕ್ಕೆ ಮುಟ್ಟಿದೆ. ಪರಿಣಾಮವಾಗಿ...."ಫಕ್ಕನೆ ಕೋರ್ಟಿಗೆ ಹೋಗಬೇಡಿ ನಾಯಕರೆ.... ಹೇಗಾದರೂ ನಿಮ್ಮ ಹಣ ಹೋಗದು...." ಎಂದು ರಾಜಿಮಾಡಿ ಕೊಂಡೆ....''ನೀವು ಕಣ್ಣಮುಂದೆ ಇರುವಾಗ ಕೋರ್ಟಿಗೆ ಹೋಗು ತ್ತೇನೆಯೆ? ವಸೂಲಿಯಾಗದ ಸಾಲಕೊಡುವುದಕ್ಕೆ ನಾನೇನು ಹುಚ್ಚನೆ?" ಎಂದು ನಾಯಕ ನನ್ನನ್ನು ಸಮಾಧಾನ(?)ಪಡಿಸಿದ. ಅವನು ಹುಚ್ಚ ನಲ್ಲ—ಎಂಬುದೇನೋ ನಿಜ; ನಾನು?

ಕೆಲದಿನ ಕಳೆದುಹೋಗುವಷ್ಟರಲ್ಲಿ ಸದಾನಂದ ವಿಲಾಸದ ವೈಕುಂಠ ರಾಯನು ನನಗೆ ಸದಾನಂದವನ್ನು ಕೊಡುವುದರ ಬದಲು ಸದಾ ದುಃಖ ಕರನಾಗಿ ಅವತಾರ ಹೊಂದಿದ. ಅಲ್ಲಿಯೂ ಅದೇ ಕತೆ........ಪರಿಚಯ ಇಲ್ಲದವರಿಗೆ ಸಾಲಕೊಡುವಾತ ಅವನೂ ಇಲ್ಲ; ಇಬ್ಬರೂ ಅಣ್ಣತಮ್ಮಂದಿ ರಂತೆ ಒಟ್ಟಿಗೆ ಬಂದು ಕಾಫಿ ಕುಡಿದಿದ್ದೆವು. ಇಬ್ಬರ ಲೆಕ್ಕವೂ ಒಬ್ಬರ ಹೆಸರಲ್ಲಿದೆ; ಆ ಒಬ್ಬರೆಂದರೆ ಭಟ್ಟರು....ನಾಯಕನು ಹೇಗೆ ಹುಚ್ಚ ನಲ್ಲವೋ ಹಾಗೆ ವೈಕುಂಠರಾಯನೂ ಹುಚ್ಚನಲ್ಲ....ನಾನು ಕಣ್ಣಮುಂದೆ ನಿಂತಿರುವಾಗ ಕೋರ್ಟಿಗೆ ಹೋಗುವುದಿಲ್ಲವೆಂದು ಅವನ ಭರವಸೆಯೂ ಆಯಿತು. ಮತ್ತೇನನ್ನೂ ಬಿಡಬಹುದಾಗಿತ್ತು; ಆದರೆ ಕಾಫಿಯನ್ನು ಅದರಲ್ಲಿಯೂ ವೈಕುಂಠನ ಅಮೃತಹಸ್ತದಿಂದ ಸಿದ್ಧವಾಗುವುದನ್ನು ಬಿಡು ವುದೇಕೆ? ಬಿಡದಿರಬೇಕಾದರೆ, ಮೋಹನನ ಬಾಕಿ ಲೆಕ್ಕವನ್ನು (ಅವನು ಎಷ್ಟು ಕೊಟ್ಟಿದ್ದನೆಂದು ಹುಡುಕುವ ಕೆಲಸವೇ ಇರಲಿಲ್ಲ; "ಅದುದೆಲ್ಲ ಬಾಕಿಯೆ!'') ನಾನೇ ತೀರಿಸಬೇಕಾಗಿ ಬಂತು. ನನ್ನ ಮತ್ತು ಸದಾನಂದ ''ಕಾಫಿಭವನ"ದ ಋಣಾನುಬಂಧ ಹೇಗೂ ಕಡಿದುಹೋಗದಂತಾಯಿತು.

ನನ್ನ ತಲೆಯ ಮೇಲೆ ಬಿದ್ದುದು ಸಾಲದ ಹೊರೆಯಲ್ಲ; ಸಿಡಿಲು! ನಗರವಾಸದ ಸುಖಕ್ಕಾಗಿ ಮನೆಬಿಟ್ಟಿದ್ದೆ. ಇದ್ದುದರಲ್ಲಿಯೇ ಸುಖವಿರಲಿ ಎಂದು ಏಕಾಂತವಾಸಿಯಾಗಿದ್ದೆ. ಏಕಾಂತ ಸುಖಸ್ಫೂರ್ತಿಯಲ್ಲಿ ಬರೆಯ

ತೊಡಗಿದ್ದೆ; ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಿದೆ; ಈ ಪಾಪಕ್ಕೆ ಇಂದು ಪ್ರಾಯಶ್ಚಿತ್ತ ಮಾಡಬೇಕಾಯಿತು. ಪ್ರತಿಫಲವಿಲ್ಲದೆ ಬರೆದ ಕಥೆ ಕಾವ್ಯಗಳಿಗೆ ಪ್ರತಿಫಲ ಸಿಕ್ಕಿತು. ಇನ್ನು ಮುಂದೆ ಸರ್ವಥಾ ಬರೆಯುವ ಹಾಗಿಲ್ಲ; ಬರೆದರೂ ಪ್ರಕಾಶಿಸುವುದಿಲ್ಲ........ಎಂದು ಶಪಥ ಮಾಡೋಣವೆ? ಎಂದೂ ತೋರಿತು. ವಿಚಾರಿಸಿ, ವಿಚಾರಿಸಿ—ಬರೆದುದರಿಂದಲ್ಲ; ಪ್ರಕಾಶಪಡಿಸಿದುದರಿಂದಲ್ಲ; ಬೇರೇನೋ ಒಂದು ಕಾರಣದಿಂದ ಹೀಗಾಯಿತೆಂದು ಭಾಸವಾದಾಗ ಮಳೆಗಾಲದ ದಿನಗಳ–ಬಿರುಗಾಳಿಯ–ತೆರೆದ ಬಾಗಿಲಿನ ನೆನಪು ಬಂತು. ನಾನು ಕೀರ್ತಿಶಾಲಿಯಾದ ಲೇಖಕನಾಗಿದ್ದು ಲೆಕ್ಕಣಿಕೆಯನ್ನು ಮುಟ್ಟೆನೆಂದು ಪ್ರತಿಜ್ಞೆಮಾಡುವುದಾದರೂ ಹೇಗೆ? ಇದರಿಂದ ಬರುವ ನಷ್ಟ ಲೋಕಕ್ಕೆ! ಅಂತಹ ಮಹಾಹಾನಿಗೆ ನಾನು ಕಾರಣವಾಗಬೇಕೆ? ಸರ್ವಥಾ ಕೂಡದು! ಕೂಡದು!! ಕೊನೆಗೆ ತಪ್ಪುಮಾಡಿದುದು ಮೋಹನನನ್ನು ಒಳಗೆ ಬಿಟ್ಟ ಬಾಗಿಲು! ಆದುದರಿಂದ "ಇನ್ನು ಮುಂದೆ ಅಪರಿಚಿತರಾರೂ ಬರಕೂಡದು"(No Admission for Strangers!) ಎಂದು ಬರೆದು ಬಾಗಿಲಿಗೆ ಅಂಟಿಸಿಬಿಡೋಣ ಎಂದು ಉಪಾಯ ಹೊಳೆಯಿತು. ಇದೂ ಹುಚ್ಚು ಯೋಚನೆ........ಮೋಹನ ಬಂದುದು ಅಪರಿಚಿತನಾಗಿ ಅಲ್ಲ.....ನನ್ನ ಅಪರೂಪ ದರ್ಶನ ಪಡೆದ ಸ್ವಲ್ಪ ಪರಿಚಯದಿಂದಲೇ ಬಂದಿದ್ದ. ಆದುದರಿಂದ ಅವರಂತವರನ್ನು ತಡೆದು ನಿಲ್ಲಿಸುವ ಶಕ್ತಿ "ಅಪರಿಚಿತರು ಬರಕೂಡದು" ಎಂದು ಬರವಣಿಗೆ ಹೊತ್ತ ಬಾಗಿಲಿಗೂ ಇಲ್ಲವೆಂದು ಖಚಿತವಾಯಿತು. ಮುಚ್ಚಬೇಕಾದುದು ಬಾಗಿಲನ್ನಲ್ಲ; ಎದೆಯನ್ನು! ಬರೆದು ಹಚ್ಚಬೇಕಾದುದು ಬಾಗಿಲಲ್ಲಿ ಅಲ್ಲ; ಮನಸ್ಸಿನಲ್ಲಿ....ಎಂದು ತೋರಿತು.

ನಾಯಕರ, ಶ್ರೀನಿವಾಸಯ್ಯನ, ವೈಕುಂಠನ ಹಂಗುಗಳನ್ನು ಕಡಿದುಕೊಳ್ಳಬೇಕಾದರೆ ನನಗಾದ ಕಷ್ಟ ಎಷ್ಟೆಂಬುದನ್ನು ಹೇಳುವುದರಲ್ಲಿ ಏನೂ ಸ್ವಾರಸ್ಯವಿಲ್ಲ. ತಮ್ಮ ಹಣವೆಲ್ಲ ಸಂದಾಯವಾದ ಮೇಲೆ, ನನ್ನ ಸಹಪಾಠಿ ನಾಯಕರೊಮ್ಮೆ ನಗುತ್ತ ಹೀಗೆಂದರು. "ಲೋಕದಲ್ಲಿ ಮಾನವಂತರಾಗಿ ಹುಟ್ಟುವುದು ಮಹಾಪಾಪ; ಆ ಪಾಪಮಾಡಿದವರು ನೀವು; ಅದಕ್ಕಾಗಿ ಈ ಕಷ್ಟಪಡಬೇಕಾಯಿತು! ಸ್ವಾಮಿ."

ಇರಬಹುದು; ಅಲ್ಲವೆನ್ನುವುದು ಹೇಗೆ?

* * * *

ಎರಡು ನಿಷ್ಠುರವರ್ಷಗಳು ಕಳೆದುಹೋದುವು. ಆಗ ನಾನೆಷ್ಟೋ ಬುದ್ಧಿ ಕಲಿತ್ತಿದ್ದೆನು ಎಂದು ನನ್ನ ಭಾವನೆ. ಒಮ್ಮೆ ಮದ್ರಾಸಿನಿಂದಲೋ ಬೆಂಗಳೂರಿನಿಂದಲೋ ಬರುತ್ತಾ ಒಂದು ಉಗಿಬಂಡಿಯ ಠಾಣ್ಯದಲ್ಲಿ ಹದಿನೈದು ನಿಮಿಷ ಬಂಡಿ ನಿಂತಿತ್ತು. ಹತ್ತೆಂಟು ಜನ ಸಂಗಡಿಗರೊಂದಿಗೆ ದೂರದಲ್ಲಿ ಐರೋಪ್ಯ ವೇಷದಲ್ಲೊಪ್ಪುವ ವ್ಯಕ್ತಿಯೊಬ್ಬ, ಒಂದನೆಯ ವರ್ಗದ ಬಿಳಿ ಗೃಹಸ್ಥನೊಬ್ಬನೊಡನೆ ಸಂಭಾಷಣೆ ಮಾಡುತ್ತಿದ್ದ. ಅವನ ಬಳಿಯಿಂದ ನಾನಿರುವ ಬಂಡಿಯ ಕಡೆಗೆ ಬರುತ್ತಿದ್ದ ಅವನ ಸುಪರಿಚಿತರಿಬ್ಬರು........"ಎಂಥ ಸಾಹಸಿಯಯ್ಯ........ಹಿಂದೆ ತಿಂಗಳೊಳಗೆ ಹತ್ತು ಲಕ್ಷದ ವಹಿವಾಟು ಮಾಡಿದ...." ಎಂದು ಆಂಗ್ಲಭಾಷೆಯಲ್ಲಿ ಆಡುತ್ತಿದರು. ಯಾರಿಂತಹ ಸಾಹಸಿ ಎಂದು ಪ್ರಶ್ನಿಸಬೇಕೆಂದು ತೋರಿತು.

"ನೋಡಿ....ಅವರು....ಮೆಳ್ಳೆಗಣ್ಣಿನ ಆ ಜನ. ನೋಡಿ.... ಅವನಂತಹ ವ್ಯವಹಾರ ಚತುರರನ್ನು ಕಂಡಿಲ್ಲ...." ಎಂದು ಆತ ತಿಳಿಸಿದ. ಹೆಚ್ಚಿನ ವಿವರಗಳನ್ನು ನಾನಪೇಕ್ಷಿಸಿದೆ; ಕಲ್ಕತ್ತೆಯಲ್ಲಿ "ಈಸ್ಟ್ ಎಂಡ್ ವೆಸ್ಟ್ ಕಮರ್ಶಿಯಲ್ ಏಜೆನ್ಸಿಸ್" ಎಂಬ ವ್ಯಾಪಾರಿ ಮಂಡಳಿಯಿದೆ; ಅದರ ಯಜಮಾನ ಆತ. ಮಾರಾಟದ ವಸ್ತುಗಳೊ....ಪ್ರತಿಯೊಂದು....ಹಪ್ಪಳದ ಮೊದಲುಗೊಂಡು ಮೋಟರ್‌ಕಾರುಗಳ ವರೆಗೆ ಸಕಲ ಸಾಮುಗ್ರಿಗಳು.

ಹೆಚ್ಚು ಸಂಭಾಷಣೆಗೆ ಅವಕಾಶವಿರಲಿಲ್ಲ; ಇನ್ನೊಂದೆರಡೇ ನಿಮಿಷ; ಬಂಡಿ ಹೊರಡುವುದು; ಪ್ರಯಾಣಿಕರೆಲ್ಲ ಓಡಿಬಂದು ತಂತಮ್ಮ ಬಂಡಿಗಳನ್ನು ಏರತೊಡಗಿದ್ದರು. ಅಷ್ಟರಲ್ಲಿ ಆ ವ್ಯಕ್ತಿ ನಾನಿದ್ದ ಬಂಡಿಗೇ ಬಂದು "ಭಟ್ಟರೆ........ಭಟ್ಟರೆ ಪರಿಚಯವಾಯಿತೆ....ಕ್ಷೇಮವೇ........ ಬಹಳ ಅಪರೂಪವಾಗಿದೆ ನಿಮ್ಮ ದರ್ಶನ!" ಎಂದು ಜೇಬಿನೊಳಗೆ ನನ್ನದೇ ಆಗಿ ಅಡಗಿಕೊಂಡಿದ್ದ ಬಲಗೈಯನ್ನು ಬಲಾತ್ಕಾರದಿಂದ ಎಳೆದು ಕುಲುಕಾಡಿಸಿಬಿಟ್ಟ.

ಸಾಧ್ಯವಿದ್ದರೆ ಕಣ್ಣಿನಿಂದ ಕಚ್ಚಿಬಿಡುತ್ತಿದ್ದೆ; ಕಿವಿಯಿಂದ ನುಂಗಿಬಿಡುತ್ತಿದ್ದೆ; ಸಾಧ್ಯವಿದ್ದರೆ—ಆ ವ್ಯಕ್ತಿಯನ್ನು ಸಜೀವವಾಗಿ ಅಲ್ಲಿಯೇ ಹೂಳಿಬಿಡುತ್ತಿದ್ದೆ........ನನ್ನ ಮುಂದೆ ನಿಂತಿದ್ದ ವ್ಯಕ್ತಿ ಅದೇ ಮೋಹನರಾಯ! ಪುತ್ತೂರೂ ಇಲ್ಲ....

‘‘ನನ್ನ ದರ್ಶನವ್ಪೋ ....ಹೌದು :... ಅಪರೂಪ ........ ಇನ್ನು ಜೀವಾವಧಿ ನನ್ನ ನಿಮ್ಮ ದರ್ಶನವಾಗದೆಂದು ಭರವಸೆಕೊಡುವುದಿದ್ದರೆ ತೆಗೆದುಕೊಳ್ಳಿ....ಇನ್ನೂ ಐನೂರು ರೂಪಾಯಿಗಳನ್ನು!’’ ಎಂದು ಸಿಟ್ಟಿನಿಂದ ತುಟಿ ಕಚ್ಚುತ್ತಾ ಮುಖ ಕೆಂಪೇರಿಸುತ್ತಾ ಒದರಿಬಿಟ್ಟೆ.

‘‘ಹ ಹ್ಹಾ ಹ್ಹಾ....ಎಂತಹ ರಸಿಕರಯ್ಯ ನೀವು....ಅದು ಹಾಗಿರಲಿ....ಬಹಳ ಚೆನ್ನಾಗಿತ್ತು....ಏನನ್ನೊ ಹೇಳಲಾರಂಭಿಸಿದ.”

‘‘ಬಹಳ ಚೆನ್ನಾಗಿತ್ತು—ನಿನ್ನ ತಲೆ!’’ ಎಂದು ಮೆಣಸು ನುರಿದಂತೆ ಶಬ್ದಗಳನ್ನು ಕಾರಿಬಿಟ್ಟೆ....

‘‘ನನ್ನ ತಲೆಯಲ್ಲೇನು? ಟೊಳ್ಳು....ನಿಮ್ಮ ತಲೆಯಿಂದ ಹೊರಡುವ ಕಾವ್ಯ ನಿರ್ಝರ....ಯಾವ ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ಮರೆತುಹೋಯಿತು....ಮಿಂಗುಲಿ ಎಂಬ ಪದ್ಯ....ಬಲು ಸೊಗಸಾಗಿತ್ತು....ಬಲು ಸೊಗಸಾಗಿತ್ತು....ಓದಿ ಓದಿ....ಓದಿ....ಇಡೀ ರಾತ್ರಿ ಸಂತೋಷದಿಂದ ಕುಣಿದೆ....’’ ಎಂದು ಹೇಳುವಷ್ಟರಲ್ಲಿ ಬಂಡಿ ಹೊರಟಿತು. ಇದುವರೆಗೆ ಅವನ ಮಾತು ಮಾತಿಗೆ ಸಿಟ್ಟೇರಿದ್ದ ನಾನು ‘‘ಮಿಂಗುಲಿ’’ ಪದ್ಯದ ಸೊಗಸನ್ನು ಕೇಳಿದೊಡನೆ ಸಿಟ್ಟಾಗದೆ ಮೊಲೆಯೂಡುವ ಮಗುವಿನಂತೆ ಏಕೆ ಕಿವಿಕೊಡುತ್ತಾ ಕುಳಿತೆನೊ....ತಿಳಿಯದು.

ಅಂತೂ ಉಗಿಬಂಡಿಯೂ ಅಪಾಯ ಸೀಮೆಯನ್ನು ದಾಟಿತು. ನನ್ನನ್ನು ಹೊತ್ತುಕೊಂಡು ಓಡತೊಡಗಿತು....ಮಿಂಗುಲಿ ಪದ್ಯದ ಪ್ರಶಂಸೆ ಉಳಿಯಿತು ಅವನ ಬಾಯಿಯಲ್ಲಿ....ಅವನ ಶರೀರ ಆ ನಿಲ್ದಾಣದಲ್ಲಿಯೆ ನಿಂತಿತು....ಬಂಡಿಯೊಳಗಿದ್ದ ಒಂದೇ ನಿಮಿಷ ಹರದಾರಿ ದೂರಕ್ಕೋಡಿದೆ ನಾನು. ಕುಳಿತಲ್ಲಿಂದಲೆ ಒಮ್ಮೆ ಹಿಂದೆ ನೋಡಿ ‘‘ಬದುಕಿದೆ....ಬದುಕಿದೆ....ಮತ್ತೊಮ್ಮೆ ಈ ಜಂತುವಿನ ಬಾಯಿಗೆ ಬೀಳದೆ ತಲೆತಪ್ಪಿಸಿಕೊಂಡು ಬಂದೆ!’’ ಎಂದು ನನ್ನನ್ನು ನಾನೇ ಅಭಿನಂದಿಸಿದೆ.



# ಹೊಡೆಯುವ ಗಡಿಯಾರ

'ಎಲಾರ್ಮ್ ವಾಚ್' ಎಂದರೆ ಗೊತ್ತಿದೆಯಷ್ಟೆ? ಬೇಕಾದ ಘಂಟೆಗೆ ಮುಳ್ಳುವೊನೆಯನ್ನು ಅಂಕಿಸಿ, ತಿರುಗಣೆ ತಿರುಗಿಸಿ ಇಟ್ಟುಬಿಟ್ಟರೆ ಸರಿ, ಆ ಸಮಯಕ್ಕೆ ಸರಿಯಾಗಿ ಠಣ ಠಣಿಸಿ, ನಿದ್ರೆಯ ಬೇರು ಬೇರುಗಳನ್ನೂ ಕಿತ್ತೆಸೆದು ಎಚ್ಚರಿಸುವ ಗಡಿಯಾರ ಅದು. ಮನೆ ಮನೆಗೊಂದು ಅಂತಹ ಗಡಿಯಾರವಿದ್ದರೆ ಸೂರ್ಯಚಂದ್ರರ ಹಂಗು ಬೇಕಾಗಿಲ್ಲ; ಅವರು ಮೂಡಲಿ—ಮುಳುಗಲಿ, ಕಾಲಚಕ್ರ ತಿರುಗಲಿ, ತಿರುಗದಿರಲಿ; ಅದು ಘಂಟೆಯನ್ನು ಹೊಡೆದೇ ಬಿಡುವುದು!

ನಾನು ಹೇಳುವ ಗಡಿಯಾರ ಅಂಗಡಿಯಲ್ಲಿ ವಿಕ್ರಯವಾಗುವ ಒಡವೆಯಲ್ಲ. ಅದು ಜನ್ಮಾಂತರ ಪುಣ್ಯಫಲದಿಂದ ಸಿಕ್ಕುತ್ತದೆ; ಕೆಲವರಿಗೆ ಮಾತ್ರ ಸಿಕ್ಕುತ್ತವೆ; ಪುಣ್ಯಮಾಡುವವರು ಕೆಲವರೇ ಅಲ್ಲವೆ? ಬೆಲೆಗೆ ಸಿಕ್ಕುವುದಿಲ್ಲ; ಅಮೂಲ್ಯ ವಸ್ತು ಅದು. ಲೋಹದ ಗಡಿಯಾರದ ಹೊಡೆವ ಶಕ್ತಿ ಅಪಾರವಾದರೂ, ನಾವು ಬೇಕೆಂದು ಅಪೇಕ್ಷಿಸಿದಾಗ ಮಾತ್ರ ಅದು ಹೊಡೆಯಬಲ್ಲುದು. ದಿವಸ ಇಪ್ಪತ್ತ ನಾಲ್ಕು ಘಂಟೆಯ ಪ್ರತಿ ನಿಮಿಷದಲ್ಲಿಯೂ ಎಡೆತಡೆಯಿಲ್ಲದೆ ಹೊಡೆಯುವುದೊಂದಿದೆ; ಅದೇ 'ಹೆಂಡತಿ!'—ಎಂದರೆ; ನನ್ನ ವೆಂಕಮ್ಮನಂತಹ ಹೆಂಡತಿ; ಇಂತಹ ವಸ್ತುಗಳು ಲೋಕದಲ್ಲಿ ಎಷ್ಟಿದ್ದಾವು?

ಮದುವೆಯಾದಾಗ, ವೆಂಕಮ್ಮನಿಗೆ ಮಾತಿನ ಶಕ್ತಿಯನ್ನು ಪರಮಾತ್ಮನು ಕೊಟ್ಟಿದ್ದಾನೆಯೆ? ಇಲ್ಲವೆ? ಎಂಬ ವಿಷಯದಲ್ಲಿ ನನಗೇ ಸಂದೇಹವಿತ್ತು. ಎಳೆ ಹುಡುಗಿಯಾಗಿದ್ದಾಗ, ಯಾರೂ ಇಲ್ಲದ ಸಮಯವನ್ನು ಸಾಧಿಸಿ, ಗಲ್ಲ ಸವರಿ "ಏನೇ! ನನ್ನೊಂದಿಗೆ ಮಾತಾಡುವುದಿಲ್ಲವೇ?" ಎಂದು ಪ್ರೇಮ ಸೂಸುವ ಪ್ರಶ್ನೆಹಾಕಿದರೆ, ಮುಖ ತಿರುಗಿಸುತ್ತಿದ್ದ ಮೂಕಪ್ರಾಣಿ ಅವಳು; ಮಕ್ಕಳಾದಂತೆ ಮಾತಿನ ಬಲ ಹೆಚ್ಚುತ್ತಾ ಬಂತು. ಅವುಗಳ ಸಂಖ್ಯೆಯೊಂದಿಗೆ ಮಾತಿನ ರಭಸ ಗಡುಸಾಗತೊಡಗಿತು. ನಾಲ್ಕೆಂಟು ಮಕ್ಕಳನ್ನು ಕಾಣಿಕೆ ಕೊಟ್ಟ ಮೇಲಂತೂ ಮೂಕತೆ ನನಗೆ; ಮಾತೆಲ್ಲ ಅವಳಿಗೆ! ಕಿವಿಯಲ್ಲಿ ಕೇಳಿ ಶ್ರವಣಶಕ್ತಿಯನ್ನು ಉಳಿಸಿ

ಕೊಳ್ಳುವುದು ಹೇಗೆ ಎಂಬುದೇ ದೊಡ್ಡ ಯೋಚನೆಯಾಯಿತು. ಒಮ್ಮೊಮ್ಮೆ ವೆಂಕಮ್ಮನಿಗೆ ಆವೇಶ ಬಂದಿತೆಂದರೆ, ಮನೆಯ ಮಾಡುಗಳೂ ಎದ್ದು ಕುಣಿಯುವ ಆಸಕ್ತಿಯನ್ನು ತೋರಿಸುತ್ತಿದ್ದುವು. ಹೊರಗಿನ ಚರಾಚರ ಪ್ರಪಂಚವು ಆಕೆಯ ಸನ್ನಿಧಿಯಿಂದ ಪಲಾಯನ ಮಾಡುವಂತೆ ಕಾಣಿಸುತ್ತಿತ್ತು. ನಾನು ಹೊರಗಿನ ಪ್ರಪಂಚದ ಸ್ವತಂತ್ರ ಪ್ರಾಣಿಯಲ್ಲ ಎಂದಮೇಲೆ, ಓಡುವುದಾದರೂ ಹೇಗೆ? ಎಲ್ಲಿಗೆ? ಮನಸ್ಸಿಗೆ ಅಸಹ್ಯ ಹಿಂಸೆ; ಸಹಿಸಲಾರದ ಕೋಪ; ಕೋಪವನ್ನು ನಾಲಗೆಯಿಂದ ಸುರಿಸುವ ಧೈರ್ಯವಿದ್ದರೂ ಪ್ರವೃತ್ತಿಯಿರಲಿಲ್ಲ. ತ್ರಿಕರಣಪೂರ್ವಕವಾದ ಅಹಿಂಸೆ ನನ್ನದು. ಹೀಗಾಗಿ "ಎಲಾರ್ಮ್ ವಾಚ್—" ಎಂಬ ತಮಾಷೆಯ ಹೆಸರಿಟ್ಟು ವೆಂಕಮ್ಮನ ಮೇಲೆ ಪ್ರತೀಕಾರ ಹೂಡುತ್ತಿದ್ದೆ.

ನಾನು ಮೌನಿಯಾಗಿ ಮನೆಯೊಳಗೆ ಸುಳಿಯುತ್ತಿದ್ದರೂ ಆವಳೊಬ್ಬಳೇ ಹೇಗೆ—ಯಾವ ಕಾರಣಕ್ಕಾಗಿ—ಮಾತಾಡಬಹುದೆಂಬುದು ಸಹಜವಾದ ಪ್ರಶ್ನೆ. ವೆಂಕಮ್ಮನ ನಡತೆ ಗೊತ್ತಿರುವವರಿಗೆ ಉತ್ತರ ಸುಲಭವೆ. ನಾನು ಬೆಳಗಿನ ಜಾವದಲ್ಲಿ ಬೇಗನೆ ಎದ್ದರೆ "ಏನು ಹುಡುಗಾಟ? ಇಬ್ಬನಿ ಬೀಳುತ್ತಿದೆ; ಚಳಿಗಾಳಿ ಬೀಸುತ್ತದೆ; ಸ್ವಸ್ಥ ಮಲಗಿಕೊಳ್ಳಬಾರದೇ? ಎಂದು ವೆಂಕಮ್ಮನ ಪ್ರೀತಿಯ ಕಟ್ಟಪ್ಪಣೆ'' ತಡಮಾಡಿ ಎದ್ದರೆ ''ಸೂರ್ಯದೇವರು ಮೇಲೆ ಬಂದು ಜಾವವಾಯಿತು; ಇನ್ನೂ ಕುಂಭಕರ್ಣ ನಿದ್ರೆಯೇ?" ಎಂಬ ಉಪಮಾಲಂಕಾರದ ಉದ್ಗಾರ. ಸುಮ್ಮನೆ ಕುಳಿತರೆ ಬೆಳಗ್ಗೆ ಗೂಗೆಯಂತೆ ಕುಳಿತಿದ್ದಾರೆ; ಎಂದು; ಎದ್ದು ಅಡಿಗೆ ಕೆಲಸಕ್ಕೆ ಕೈಕೊಡುತ್ತೇನೆಂದರೆ—ಹೆಂಡತಿಯಿಂದ ಏನೂ ಸಾಗದು, ಎಲ್ಲ ತಮ್ಮಿಂದಲೇ ನಡೆಯುತ್ತದೆ ಎಂದು ಹೊರಗೆ ಜಂಭಕೊಚ್ಚಿಕೊಳ್ಳುವುದಕ್ಕಲ್ಲವೆ ಈ ಹೂಟ? ಎಂದು. ಕಾಫಿ ಕುಡಿವಾಗ ಮೌನವಾಗಿ ಕುಳಿತರೆ ಕಾಫಿಗೆ ಸಕ್ಕರೆ ಹೆಚ್ಚೋ ಕಡಿಮೆಯೊ? ಏನೂ ಹೇಳದೆ ಬೆಟ್ಟು ಚೀಪುತ್ತಾ ಕುಳಿತಿರುವಿರಲ್ಲ ಎಂದು; ಸಕ್ಕರೆ ಹೆಚ್ಚು—ಪುಡಿ ಕಡಿಮೆ ಎಂದರೆ ನನಗೆ ಕಾಫಿ ಮಾಡುವುದಕ್ಕೂ ಬರುವುದಿಲ್ಲ; ಚೆನ್ನಾಗಿ ಕಾಫಿ ಮಾಡಬಲ್ಲ ಹೊಸ ಹೆಂಡತಿಯೊಬ್ಬಳನ್ನು ಮದುವೆಯಾಗಬಾರದೆ? ಎಂದು ಉತ್ತರ ಕೊಡುವುದಾಯಿತು. ವೆಂಕಮ್ಮನ ವಾಗ್ಜಾಲವನ್ನು ಎಷ್ಟೂ ವರ್ಣಿಸಬಹುದು. ಕತೆಯ ಮಟ್ಟಿಗೆ ಇಷ್ಟೆ ಸಾಕು; ನಾನು ಆ ಜಾಲದಲ್ಲಿ ಸಿಕ್ಕಿಬಿದ್ದ ಒಂದು ಬಡ ಜಿಂಕೆ!

ವೆಂಕಮ್ಮನಿಗೆ ಮಡಿ ಮೈಲಿಗೆಗಳ ಆಚರಣೆಯಲ್ಲಿ ವಿಶ್ವಾಸ ಬಹಳ. ಅಂಗಡಿಯಿಂದ ದವಸಧಾನ್ಯಗಳನ್ನು ತಂದರೆ, ಅವು ಮುಟ್ಟಬಾರದ ಜಾತಿಗಳ ಸ್ಪರ್ಶದಿಂದ ಅಶುದ್ಧವಾಗಿವೆಯೆಂಬ ಕಾರಣದಿಂದ ಶುದ್ಧಸ್ನಾನ ಮಾಡಿಸಿಕೊಂಡೇ ಮನೆಯೊಳಗವು ಪ್ರವೇಶಿಸಬೇಕೆಂಬ ಕಟ್ಟು; ಸ್ನಾನ ವಲ್ಲದಿದ್ದರೆ ನೀರಿನ ಪ್ರೋಕ್ಷಣೆಯಾದರೂ ಆಗಬೇಕು. ಅವುಗಳಿಗಿಂತ ಎಷ್ಟೋ ಹೆಚ್ಚು ಬೆಲೆಯುಳ್ಳ ಸರಕಾದ ನಾನೂ, ಪೇಟೆಯಿಂದ ಬಂದು ಸ್ನಾನಮಾಡುವ ಮುಂಚೆ ನನ್ನ ಕೋಣೆಯೊಳಗಲ್ಲದೆ ಹೊರಗೆ, ಕಾಲಿಡ ಕೂಡದು; ಅಡಿಗೆಕೋಣೆಗಂತೂ ಹರದಾರಿ ದೂರದಲ್ಲಿ ನಿಲ್ಲಬೇಕು. ತಿಂಗಳು ತಿಂಗಳು ಅಶೌಚದ ಮೂರು ದಿನ ಕಳೆದು ನಾಲ್ಕನೆಯ ದಿನ ದಲ್ಲಂತೂ ವೆಂಕಮ್ಮನ ಶುದ್ಧಕ್ಕೂ— ಮನೆಯೊಳಗಣ ಸಕಲ ಪದಾರ್ಥಗಳ ಅಶುದ್ಧಕ್ಕೂ ಖಾಡಾ ಖಾಡಿ. ಅವಳು ಮುಟ್ಟೆಂದು ಹೊರಗೆ ಕುಳಿತಿರು ವಾಗ, ನನ್ನಂತಹ ಆಚಾರಭ್ರಷ್ಟರು ಏನು ಮಾಡಿರಲಿಕ್ಕಿಲ್ಲ? ಎಂಬ ಸಂದೇಹದಿಂದ ಇಡೀ ಮನೆಯ ಮೇಲೆಯೇ ಯುದ್ಧ ಸಾರುವುದು ಅವಳ ಸಂಪ್ರದಾಯ. ಚತುರ್ಥ ಸ್ನಾನವಾದ ದಿನ ಮನೆಯೊಳಗಣ ಎಲ್ಲ ವಸ್ತುಗಳಿಗೂ, ಅಟ್ಟದ ಮೇಲೆ, ಒಲೆಯ, ಹಿಂತೊಲೆಯ ಬಳಿ, ನೆಲುವಿನ ಮೇಲೆ, ದಾರಂದದ ಮೇಲೆ, ಎಲ್ಲ ಕಡೆ ಸಂಶೋಧನ ನಡೆಯಬೇಕು. ನಡನಡುವೆ ಸಿಕ್ಕಿಬಿದ್ದ ಇಲಿ ಹೆಗ್ಗಣಗಳಿಗೂ, ಮಂಚ, ಮೇಜು, ಕುರ್ಚಿ ಗಳೊಳಗಣ ಕೋಟೆಗಳಲ್ಲಿ ಭದ್ರವಾಗಿ ಡೇರೆಹೊಡೆದ ತಗಣೆಗಳಿಗೂ, ಶುದ್ಧೋದಕದ ಸ್ನಾನವಾಗಲೇಬೇಕು; ಎಂದಮೇಲೆ, ವೆಂಕಮ್ಮನ ಬಿರುಸು ಕಣ್ಣಿನ ಮುಂದೆ ಯಾವ ಅಶುದ್ಧತೆ ಹೇಗೆ ತಾನೆ ಉಳಿದೀತು? ಇದೆಲ್ಲ ಅಧಿಕವಪ್ಪ....ಒಂದು ಬಗೆಯ ಹುಚ್ಚು....ಎಂದು ಇತರ ಸ್ತ್ರೀ ವರ್ಗವು ನನ್ನ ವೆಂಕಮ್ಮನನ್ನು ಅಪಹಾಸ್ಯಮಾಡುವುದನ್ನು ಈ ಕಿವಿ ಗಳಿಂದ ಕೇಳಿದ್ದೇನೆ. ಹುಚ್ಚೇ ಆಗಲಿ; ಪೆಚ್ಚೇ ಆಗಲಿ; ಯಾರಿಗೆ ತಮ್ಮ ಕರ್ತವ್ಯದಲ್ಲಿ, ವೆಂಕಮ್ಮನಷ್ಟು ಅಚಲನಿಷ್ಠೆಯುಂಟೋ ಅಂಥವರಿಗೆ ಅಪ ಜಯ ಬರುವ ಹಾಗಿಲ್ಲ. ಅವರ ಶ್ರದ್ಧೆ ಇತರರಿಗೆ ಹುಚ್ಚಾಗಿ ತೋರಿದ ರೇನು? ಈ ಹುಚ್ಚಿನ ಸಾಧನೆಗಾಗಿ ಪಡುವ ಕಷ್ಟವನ್ನೂ ಮಾಡುವ ತ್ಯಾಗವನ್ನೂ ನೋಡುವುದು ದೊಡ್ಡ ಭಾಗ್ಯವಲ್ಲವೆ? ಇಂತಹ ಅಚಲ ನಿಷ್ಠೆಯೊಂದನ್ನೇ ಸ್ಮರಿಸಿ—ಹುಚ್ಚಾಗಿ ತೋರುವ ವಿಕಲ್ಪಗಳನ್ನು ಮರೆತು

ಬಿಡಬಹುದಲ್ಲವೆ? ಈ ಗುಣದಿಂದಲೆ ನಾನು ವೆಂಕಮ್ಮನೊಡನೆ ಸಂಸಾರ ಹೂಡಿ ಬದುಕಿಬಂದೆ.

ಮನೆಯೊಳಗಿನ ವ್ಯವಹಾರದಲ್ಲಿ—ಹೇಳುವ ಕೆಲಸ, ಕೇಳುವ ಕೆಲಸ—ಎಂದು ಕರ್ತವ್ಯವನ್ನು ವಿಭಾಗಿಸಬಹುದು. ನಮ್ಮ ಹಿಂದೂ ಸಮಾಜದ ಕ್ರೂರಪದ್ಧತಿಯ ಫಲವಾಗಿ, ಹೇಳಬೇಕಾದವನು ಗಂಡು, ಕೇಳಬೇಕಾದವಳು ಹೆಣ್ಣು....ಎಂದು ಕಾನೂನು ಜಾರಿಯಾಗಿದೆ. ಕಾನೂನನ್ನು ಪಾಲಿಸುವ ಬುದ್ಧಿ ಒಂದು ಪಕ್ಷದಲ್ಲಿ ಇಲ್ಲದಿರುವಾಗ, ಮನೆಯೊಳಗೆ ರೌರವ. ನಾನದಕ್ಕೆ ಎಡೆಕೊಡಲೇ ಇಲ್ಲ. ಹೇಳುವ ಕೇಳುವ ಕರ್ತವ್ಯಭಾರವನ್ನು ಬದಲಾಯಿಸಿಕೊಂಡೆವು. ಹೇಳುವುದೆಲ್ಲ ಅವಳೇ; ಕೇಳುವುದೆಲ್ಲ ನಾನೆ—ಎಂಬ ಗೃಹಸೂತ್ರವು ನನ್ನನ್ನು ಸಜೀವ ಸ್ಥಿತಿಯಲ್ಲಿರಗೊಟ್ಟಿತು. ಅವಳಿಕ್ಕಿದರೆ ಊಟ; ಕೊಟ್ಟರೆ ಕಾಫಿ; ತೆಗೆದಿಟ್ಟರೆ ಹೊಸ ಬಟ್ಟೆಬರೆ; ಹಸಿವಾಗಬೇಕೆಂದು ಆಕೆಯ ಹುಕುಂ ಆದರೆ ಹಸಿವು; ಆಗಬಾರದೆಂದರೆ ಇಲ್ಲ! ಅವಳ ಮನೋವೃತ್ತಿಯ ವೈಚಿತ್ರ್ಯ ಹೇಗಿದ್ದರೂ ಅದು ನನಗೊಂದು ಬಗೆಯ ಸಂಯಮ ಶಕ್ತಿಯನ್ನು ಕೊಟ್ಟಿತೆಂಬುದನ್ನು ಮರೆಯಲಾರೆ. ಮನೆಯ ಹೊರಗೆ ಕಾಲಿಟ್ಟ ನಾನು, ನೆಟ್ಟಗೆ ಕಚೇರಿಗೆ ಹೋಗುತ್ತೇನೆ. ಸ್ನೇಹಿತರೊಂದಿಗೆ ಸರಸವಿರಸವಾಗುತ್ತದೆ. ಬರವಣಿಗೆಯಿಂದ ಕಾಗದಗಳು ಕಪ್ಪಾಗುತ್ತವೆ. ಕಿವಿಯ ಮೇಲೆ ವಿಶ್ರಾಂತಿ ಪಡೆಯುವ ಲೆಕ್ಕಣಿಕೆ ಸಾಯಂಕಾಲ ಮೇಜಿನೊಳಗೆ ಸೇರುತ್ತದೆ. ಮತ್ತೆ ಮನೆಯ ಹಾದಿ ಹಿಡಿಯುತ್ತೇನೆ. ಮನೆಯ ಇದಿರಿನ ರಸ್ತೆಗೆ ಬರುವ ವರೆಗೂ ನಾನು ಸ್ವತಂತ್ರ ಜೀವಿ; ಸ್ವಚ್ಛಂದ ಜೀವಿ. ಒಳಗೆ ಕಾಲಿಟ್ಟೊಡನೆ ಸಂಪೂರ್ಣ ಸಂಯಮ. ಈ ರೀತಿಯ ಪರಸ್ಪರ ವಿರುದ್ಧ ಗುಣಗಳನ್ನು ಒಟ್ಟೊಟ್ಟಿಗೆ ಇರಿಸಿಕೊಳ್ಳಬಹುದೆಂದು ಕಲಿಸಿದಾಕೆ ಆ ನನ್ನ ವೆಂಕಮ್ಮನಲ್ಲವೆ? "ಮಹಾಮಾಯೆ! ಈ ಪ್ರಪಂಚದ ಗಾಳಿ ಬೆಳಕುಗಳಲ್ಲಿ ಉಸಿರಾಡಿ ಬಾಳಿ, ದಿನ ದಿನಕ್ಕೆ ಬೆಳೆದು, ದುಡಿಯಲು ಮಾತ್ರ ದೇವರು ನನಗೆ ಶಕ್ತಿಯನ್ನು ಕೊಟ್ಟಿದ್ದಾನೆ. ಉಳಿದುದೆಲ್ಲ ನಿನ್ನ ಅನುಗ್ರಹದಿಂದ!" ಎಂದು ಒಮ್ಮೊಮ್ಮೆ ಪ್ರಾರ್ಥಿಸಿಕೊಳ್ಳಬೇಕು; ದುಡಿದುದನ್ನು ಪಾದಮೂಲದಲ್ಲಿ ಅರ್ಪಿಸಬೇಕು; ಇಷ್ಟಾದರೆ ನನ್ನ ಹೊಟ್ಟೆ ತುಂಬುವುದಕ್ಕೆ ಕಷ್ಟವಿಲ್ಲ. ಹೊಟ್ಟೆಯ ಸಮಸ್ಯೆ ಮುಗಿದ ಮೇಲೆ ಮತ್ತಾವ ಸಮಸ್ಯೆಯಿದೆ?

ದೇವರ ದಯೆಯಿಂದ ನನ್ನ ವೆಂಕಮ್ಮನಿಗೆ ಮೊತ್ತಮೊದಲು ಆರೋಗ್ಯ ಚೆನ್ನಾಗಿಯೇ ಇತ್ತು. ಅವಳಿಗೆ ತಲೆನೋವಾದುದರ ನೆನಪು ಕೂಡ ಇಲ್ಲ. ನನ್ನ ಎಲಾರ್ಮ್ ವಾಚಿಗೆ ನೂರು ವರ್ಷದ "ಗ್ಯಾರಂಟಿ" ಎಂದು ಹೆಮ್ಮೆಪಡುತ್ತಿದ್ದೆ. ಮಕ್ಕಳಿಗೆ ಚಿಕ್ಕ ದೊಡ್ಡ ಕುತ್ತಗಳು ಬಂದರೆ, ಆಕೆಯ ಅನುಪಾನದಿಂದಲೇ ವಾಸಿ. ಬರಬೇಕೆಂದು ಇಣಿಕಿ ನೋಡುತ್ತಿರುವ ರೋಗಗಳು ಅವಳ ಮರ್ಜಿಗೆ ಹೆದರಿ ದೂರದಿಂದಲೆ ಪಲಾಯನ ಮಾಡಿದ ಹಾಗೆ! "ನಾರಾಯಣನಿಗೆ ಈ ದಿನ ತಲೆನೋವು. ಡಾಕ್ಟರರು ಮದ್ದು ಕೊಟ್ಟಿದ್ದಾರೆ; ಎರಡು ದಿನ ಸ್ನಾನ ಬೇಡ" ಎಂದು ನಾನು ತಿಳಿಸಿದರೆ, ಮೊದಲು ಸ್ನಾನಮಾಡಿಸಿ, ತಂದ ಔಷಧಿಯನ್ನು ಅಕ್ಕಚ್ಚಿಗೆ ಹೊಯಿದು ಬೇರಿನ ಕಷಾಯಗಳನ್ನು ಕುಡಿಸುವುದೂ, ಹೊಟ್ಟೆ ತುಂಬ ಉಣಿಸುವುದೂ ಅವಳ ಕ್ರಮವಾಗಿತ್ತು. "ರೋಗಗಳಿಗೆ ಹೆದರಲೇ ಬಾರದು; ಹೇಡಿಗಳಂತೆ ಹೆದರಿ ಅನ್ನಾಹಾರ ಬಿಟ್ಟು ಕುಳಿತರೆ, ಶರೀರ ಒಡವಾಗುವುದಿಲ್ಲವೆ? ಶರೀರ ಬೆಂಡಾದರೆ ರೋಗ ಸುಮ್ಮನೆ ಕುಳಿತಿರುವುದೆ? ಅದರ ಪ್ರತಾಪ ಹೆಚ್ಚುತ್ತದೆ ಅಲ್ಲವೆ?" ಎಂಬ ಪ್ರಶ್ನೆ ಅವಳದು. ಡಾಕ್ಟರರ ಮಾತಿನಲ್ಲಿ ಆಕೆಗೆ ನಂಬಿಕೆಯಿಲ್ಲ. ಜನರಿಗೆ ರೋಗ ಬಾರದಿದ್ದರೆ, ಮದ್ದು ಖರ್ಚಾಗದಿದ್ದರೆ, ಡಾಕ್ಟರರು ಹೇಗೆ ಬದುಕುತ್ತಾರೆ? ಆದುದರಿಂದ ರೋಗಗಳನ್ನು ಸೃಷ್ಟಿಸುವುದೇ ಡಾಕ್ಟರರ ಕೆಲಸ. ಉಪವಾಸ ಹಾಕಿ ದಣಿಸಿ, ರೋಗಿಗಳಿಂದ ಹಣ ಸುಲಿಯುವುದೇ ಅವರ ವೃತ್ತಿ! ವೃತ್ತಿಗೆ ವಿರೋಧವಾಗಿ ಅವರು ನಡೆಯುತ್ತಾರೆಯೆ? ಡಾಕ್ಟರರಲ್ಲದವರು ಹಾಗೇಕೆ ಬಲಿಬೀಳಬೇಕು? ಎಂಬುದೇ ವೆಂಕಮ್ಮ ಕೇಳುವ ಪ್ರಶ್ನೆ. ಇದಕ್ಕೆ ನನ್ನಂಥವರ ಉತ್ತರ ಹೇಗೆ ದೊರಕೀತು?

ಮಕ್ಕಳಿಗೆ ಬರುತ್ತಿದ್ದ ಕುತ್ತಗಳಲ್ಲಿ ಒಮ್ಮೆ, ಒಂದು, ಮಕ್ಕಳ ತಾಯಿಯ ಪರಿಚಯ ಮಾಡಿತು, ನಾನು ಕಚೇರಿಗೆ ಹೋಗುವ ಸಮಯದಲ್ಲಿ ವೆಂಕಮ್ಮ "ತಲೆನೋವು!" ಎಂದಳು.

ಅವಳೇ ಹಾಗೆ ಹೇಳಬೇಕಾದರೆ ತಲೆಸಿಡಿತವು ಪ್ರಬಲವಾಗಿದ್ದಿರಲೇಬೇಕೆಂದು ಊಹಿಸಿಕೊಂಡೆ. ಒಳ್ಳೆಯ ಮೆಣಸು ಶುಂಠಿಗಳ ಕಷಾಯದ ಪ್ರವಾಹದಲ್ಲಿ ಕೊಚ್ಚಿಹೋಗದ ನೋವು ವೆಂಕಮ್ಮನನ್ನು ಸೋಲಿಸುವಂತಿದ್ದಿರಬೇಕು. "ಡಾಕ್ಟರರಿಂದ ಔಷಧ ತರಲೇ?" ಎಂದು ಕೇಳಿದೆ.

"ಔಷಧವೆ? ಮಾಂಸವನ್ನೊ ಶರಾಬನ್ನೊ ಹಾಕಿದ ಔಷಧ ಸೇವಿಸುವುದಕ್ಕಿಂತ ಶುದ್ಧದಲ್ಲಿ ಪ್ರಾಣಬಿಡಬಾರದೇ?" ಎಂದಾಕೆ, ಪ್ರತಿ ಪ್ರಶ್ನೆ ಹಾಕಿದಳು. ಔಷಧ ಸೇವನೆಯಲ್ಲಿ ಆಚಾರ ಕೆಟ್ಟು ಸಾಯುವ ಕುರಿಮಂದೆಗಳ ಮೇಲೆ ಕನಿಕರವನ್ನು ಸೂಸುವ ಭಾವವಿತ್ತು ಆಕೆಯ ಮುಖದಲ್ಲಿ!

ಸಾಯಂಕಾಲ ಮನೆಗೆ ಹಿಂತೆರಳುತ್ತೇನೆ. ಹೊಡೆಯುವ ಗಡಿಯಾರದ ಸದ್ದಿಲ್ಲ. ಕೋಣೆಯೊಳಗೆ ಚಾಪೆ ಬಿಚ್ಚಿ ಮುಸುಕು ಹಾಕಿ ಮಲಗಿದ್ದಾಳೆ ವೆಂಕಮ್ಮ. ಗಾಬರಿಯಿಂದ ಒಳನುಗ್ಗಿದೆ.

''ಮೈಲಿಗೆ ಬಟ್ಟೆಯನ್ನು ಕಳಚಿಹಾಕಿ ಸ್ನಾನಮಾಡಿ ಒಳಗೆ ಕಾಲಿಡಿ! ಹೀಗೆ ರಸ್ತೆಯ ಮೈಲಿಗೆಯಲ್ಲಿ ಒಳಗೆ ಬಂದರೆ ಮನೆದೇವರಿಗೆ ಅಶುದ್ಧವಾಗದೇ?" ಎಂದಾಕೆ ಆರ್ಭಟಿಸಿದಳು.

ಮನುಷ್ಯರ ಧಾರ್ಮಿಕ ಭಾವನೆಗಳಿಗೆ ಕ್ಷತಿಮಾಡುವುದು ಮಹಾಪಾಪವೆಂದು ಕಾನೂನುಗಳೆ ಸಾರಿ ಹೇಳುತ್ತಿರುವಾಗ, ನಾನು ಸರಕಾರದ ವಿಧೇಯ ಪ್ರಜೆಯಾಗಿರುವಾಗ, ಶಾಸನವನ್ನು ಮುರಿಯಲಾಗುತ್ತದೆಯೆ? ಅವಳು ರಾಯಸಕೊಟ್ಟಂತೆಯೇ ಮೈತೊಳೆದುಕೊಂಡು ಒಳಗೆ ಕಾಲಿಟ್ಟೆ. ರೋಗಿಣಿಯ ಕೈಮುಟ್ಟಿ ನೋಡಿದಾಗ ಜ್ವರ ಕೆಂಡದಂತೆ ಕಾಯುತ್ತಿತ್ತು.

"ಡಾಕ್ಟರರಲ್ಲಿಗೆ ಹೋಗಿ ಮದ್ದು ತರುತ್ತೇನೆ; ಮೈ ವಿಪರೀತ ಕಾಯುತ್ತಿದೆ.''

"ನನ್ನ ಜ್ವರಕ್ಕೆ ಡಾಕ್ಟರರ ಮದ್ದು ಹಿಡಿಯದು. ಅಂದೊಮ್ಮೆ ನಾರಾಯಣನಿಗೆ ಜ್ವರ ಬಂದಾಗ ಸತ್ಯನಾರಾಯಣ ಪೂಜೆಯ ಹರಕೆ ಹೇಳಿದ್ದೆ. ಅದು ಆಗಲಿಲ್ಲ. ದೇವರ ಕೋಪ ಹೀಗೆ ಕಾಣಿಸಿಕೊಂಡಿದೆ. ಪೂಜೆ ಮಾಡಿಸಿರಿ. ಬೇರೇನೂ ಮದ್ದು ಬೇಡ. ಮನುಷ್ಯರಿಗೆ ಹೀಗೆ ವಿಪತ್ತು ಬಾರದಿದ್ದರೆ ದೇವರ ನೆನಪಾಗುವುದೆ?" ಎಂದಳು ವೆಂಕಮ್ಮ. ದೇವರಿಗೆ ತಿನ್ನುವ ಆಸೆ ಹುಟ್ಟುವಾಗ, ಆತ ಮನುಷ್ಯರಿಗೆ ವ್ಯಾಧಿಗಳನ್ನು ಕೊಡುತ್ತಾನೆ. ಅರ್ಪಿಸುವ ನೈವೇದ್ಯಗಳನ್ನು ಭುಂಜಿಸಿ ಹರಕೆ ಕಾಣಿಕೆಗಳನ್ನು ಜೇಬಿನಲ್ಲಿ ತುರುಕಿಸಿಕೊಂಡ ಮೇಲೆ, ಕೊಟ್ಟ ರೋಗವನ್ನು ಹಿಂದೆ ಕಿತ್ತುಕೊಳ್ಳುತ್ತಾನೆ; ಎಂದು ವೆಂಕಮ್ಮನ ವಿಶ್ವಾಸವಿರುವಾಗ, ಅದನ್ನೇಕೆ ನೋಯಿಸಬೇಕು? ಡಾಕ್ಟರರಿಗೆ ಕೊಡುವ ರೊಕ್ಕದಲ್ಲಿ ಕಾಲಂಶ ದೇವರಿಗೆ ಕೊಟ್ಟರಾಯಿತು. ಮನುಷ್ಯನ ಔಷಧಕ್ಕಾಗಿ ಕೊಡುವ ಹಣ

ದಲ್ಲಿ ಸ್ವಲ್ಪ ಭಾಗವನ್ನು ದೇವರ ತಿಂಡಿಗಾಗಿ ವಿನಿಯೋಗಿಸಿದರಾಯಿತು. ರೋಗವಾಸಿಯಾದ ಪುರುಷಾರ್ಥ—ದೇವಪೂಜೆಯ ಪುಣ್ಯ—ಇವೆರಡೂ ಒಟ್ಟೊಟ್ಟಾಗಿ ಲಭಿಸುವುವಲ್ಲವೆ?

ಮರುದಿನವೇ ಸತ್ಯನಾರಾಯಣನ ಪೂಜೆ. ಮಹಾಲಿಂಗ ಶಾಸ್ತ್ರಿಗಳು ದಪ್ಪ ಷಟ್ಪುಚ್ಛ ಹಾಕಿ, ದರ್ಭೆಯ ಕಟ್ಟನ್ನು ಬಗಲೊಳಗೆ ಸೇರಿಸಿಕೊಂಡೇ ಬಂದಿದ್ದರು. ದೇವದೈವಗಳಲ್ಲಿ ವಿಶ್ವಾಸವುಳ್ಳ ವೆಂಕಮ್ಮನ ಕರೆಯನ್ನು ಮನ್ನಿಸುವುದರಲ್ಲಿ ಅವರಿಗೆ ತುಂಬ ಆಸಕ್ತಿ.

ರಾತ್ರಿ ಹನ್ನೆರಡು ಘಂಟೆಗೆ ಪೂಜೆ ಮುಗಿಯಿತು. ಪ್ರಸಾದವನ್ನು ಹಂಚಲಾಯಿತು. ಪೂಜೆಯಾಗುತ್ತಿದ್ದಷ್ಟು ಕಾಲ, ಕಥೆಯನ್ನು ಕೇಳುತ್ತಲೂ ಸವಿಯಾದ ಭಕ್ಷ್ಯದ ಕಡೆಗೆ ದೃಷ್ಟಿ ಸುಳಿಯಿಸುತ್ತಲೂ ಇದ್ದ ವೆಂಕಮ್ಮನಿಗೆ "ಪ್ರಸಾದ ಕೊಡಬೇಡಿ'' ಎಂದು ನಾನು ಹೇಳಿದರೆ ಶಾಸ್ತ್ರಿಗಳು ಒಪ್ಪುವರೆ? ವೆಂಕಮ್ಮ ಬಿಡುವಳೇ? ನೋಡೋಣ. ಶಾಸ್ತ್ರಿಗಳಿಗಾದರೂ ಈ ಬಡಪ್ರಾಣಿಯಾದ ನನ್ನಲ್ಲಿ ದಯೆಯಿದೆಯೋ ನೋಡೋಣ, ಎಂದು ಹೀಗೆ ಕೇಳಿದೆ:

"ಶಾಸ್ತ್ರಿಗಳೇ! ಆಕೆಗೆ ಜ್ವರ ವಿಪರೀತವಾಗಿದೆ; ಸನ್ನಿಪಾತವಾಗಿರಬಹುದೆಂದು ತೋರುತ್ತದೆ. ಸವಿಯಾದ ಭಕ್ಷ್ಯ ತಿಂದರೆ ಹೇಗಾದೀತು?"

"ದೇವರ ಪ್ರಸಾದ ಆಗದೆಂದು ಯಾವ ವೈದ್ಯಶಾಸ್ತ್ರ ಹೇಳುತ್ತದೆ? ಜ್ವರ ವಾಸಿಯಾಗಬೇಕೆಂದಲ್ಲವೆ ಪೂಜೆಮಾಡಿಸಿದ್ದು? ಪ್ರಸಾದ ಸ್ವೀಕಾರ ಮಾಡದಿದ್ದರೆ ಪೂಜೆಯ ಫಲವುಂಟೆ? ಲೋಕಾನುಭವವುಳ್ಳ ನೀವೂ ನಾಸ್ತಿಕರಂತೆ ಆಡಿದರೆ? ತಿನ್ನಲಿ; ಒಂದು ಮುದ್ದೆ ತಿನ್ನಲಿ; ನಾಳೆಯೇ ರೋಗ ವಾಸಿ" ಎಂದು ಶಾಸ್ತ್ರಿಗಳು ಮದ್ದು ಕೊಟ್ಟರು!

"ಇವರಿಗೆಲ್ಲ ಹುಚ್ಚು ಶಾಸ್ತ್ರಿಗಳೇ! ಜೀವನದಲ್ಲಿ ಉಸಿರು ಕಟ್ಟಿ ಒದ್ದಾಟ ಮಾಡಿ ಗಳಿಸಿದ ಹಣವನ್ನೆಲ್ಲ ಡಾಕ್ಟರರ ಪಾದಕ್ಕೆ ಸಮರ್ಪಿಸುವುದೇ ಇವರ ಹಣೆಯಲ್ಲಿ ಬರೆದಿದೆ. ನೋಡಿ........ಡಾಕ್ಟರ್ ವಿಶ್ವೇಶ್ವರರಾಯರೆಂದರೆ ಊರೇ ಹೊಗಳುತ್ತಿದೆ. ಅವರ ಮಗನಿಗೆ ಸನ್ನಿಪಾತ ಜ್ವರ ಬಂದು ಗಂಟಲಲ್ಲಿ ನೀರಿಳಿಯದಾಗ, ಮದ್ದು ಅವರನ್ನು ಬದುಕಿಸಿತೊ....ಧರ್ಮಸ್ಥಳಕ್ಕೆ ಹೇಳಿದ ಹರಕೆ ಬದುಕಿಸಿತೊ...." ಎಂದು ತನ್ನ ನಡತೆಗೆ ಸರಿಯಾದ ಆಧಾರಕೊಟ್ಟು ಕೈನೀಡಿದಳು.

ಶಾಸ್ತ್ರಿಗಳು ಜ್ವರಕ್ಕೆ ಮುಟ್ಟುಕೋಲು ಹಾಕುವ ಪ್ರಸಾದವನ್ನು ಕೊಟ್ಟೇ ಬಿಟ್ಟರು.

ನಾರಾಯಣ..... ಸತ್ಯನಾರಾಯಣ......ಜಗದ್ರಕ್ಷಕ.......ಸರ್ವಾಂತರ್ಯಾಮಿ......ನಾಳೆಯೇ ನನ್ನ ರೋಗವನ್ನು ಗುಣಮಾಡು.... ಎನ್ನುತ್ತ ಭಕ್ಷ್ಯವನ್ನು ಕೊಂಡು, ಒಂದು ಕುಡುತೆಯಾಗುವಷ್ಟು ಪಂಚಾಮೃತ ಕುಡಿದು ಅಲ್ಲಿಯೇ ಮಲಗಿದಳು ವೆಂಕಮ್ಮ. ನನ್ನ ಮನಸ್ಸಂತೂ ನಡುಗಿತು.....ಒಂದು ವೇಳೆ ದೇವರು ಕೊಟ್ಟ ಈ ಔಷಧದ ಗುಟುಕಿನಿಂದಲೇ ರೋಗ ನಿವಾರಣೆಯಾಗಬಹುದೆಂದು ಒಪ್ಪಿಕೊಂಡರೂ, ಇಂದು ವೆಂಕಮ್ಮ ಕೊಂಡ "ಡೋಸ್" ಅತ್ಯಧಿಕವಾಗಿತ್ತೆಂದೆ ನನ್ನ ಅಭಿಪ್ರಾಯವಾಗಿತ್ತು. ಆದರೆ ಹೇಳುವುದು ಯಾರಲ್ಲಿ?

ಮರುದಿನ ಹಸೆಬಿಟ್ಟವನೇ ವೆಂಕಮ್ಮನ ನಾಡಿಯನ್ನು ಪರೀಕ್ಷಿಸಿದೆ. ನಾಡೀ ಪರೀಕ್ಷೆಯ ಶಕ್ತಿ ನನ್ನಲ್ಲಿ ಇಲ್ಲದಿದ್ದರೂ ಜ್ವರದ ವೇಗ ಮಿತಿ ಮೀರಿದೆ ಎನ್ನುವಷ್ಟು ತಿಳಿಯಿತು. ದೇಹದ ರಕ್ತ ಕಾಸಿದ ಸೀಸದಂತೆ ಹರಿಯುತ್ತಿತ್ತು ಬತ್ತ ಹಿಡಿದರೆ ಅರಳಾಗುವಷ್ಟು ಮೈ ಬಿಸಿ. ನಾನು ಗಾಬರಿಯಾದೆ. ಮೈಯನ್ನು ಕುಲುಕಿಸಿ "ಹೌದೇ? ಹೇಗಿರುವೆ?" ಎಂದು ಕೇಳಿದೆ.

"ಆದೀತು—ಗುಣವಾದೀತು; ಪೂಜೆ ಮಾಡಿಸಿ ನಾಲ್ಕು ದಿನಗಳೊಳಗೆ ವಾಸಿಯಾಗದಿರದು, ಎಂದು ಶಾಸ್ತ್ರಿಗಳು ಹೇಳಿದ್ದಾರೆ; ಸಂದೇಹ ಏಕೆ?" ಎಂದು ಕ್ಷೀಣವಾಣಿಯಲ್ಲಿ ಉತ್ತರ ಬಂತು.

"ಇನ್ನಾದರೂ ಹಟಬೇಡ. ರೋಗಿಗಳೂ ಮಕ್ಕಳೂ ಒಂದೇ ಸ್ವಭಾವದವರು—ಎನ್ನುತ್ತಾರಲ್ಲ; ನನ್ನ ಮಾತನ್ನು ಕೇಳು; ಡಾಕ್ಟರರನ್ನು ಬರಿಸುತ್ತೇನೆ."

"ಅಯ್ಯೋ ಹುಚ್ಚೆ....ಸತ್ಯನಾರಾಯಣನಿಗಿಂತಲೂ ಈ ಡಾಕ್ಟರರು ಬುದ್ಧಿವಂತರೇ?"

"ದೇವರ ಹರಿಕೆ ಸಂದಿತು; ಗುಣವಾಗುವ ಲಕ್ಷಣವಿಲ್ಲ!"

"ಎಲ್ಲದಕ್ಕೂ ಕಾಲ ಬರಬೇಕು. ಹರಿಕೆ ಸಲಿಸಿದೊಡನೆ ಗುಣ ಮಾಡಿಬಿಟ್ಟರೆ, ದೇವರು ಬಹಳ ಅಗ್ಗದವನಾಗುವುದಿಲ್ಲವೆ? ಇದರಿಂದಾಗ ದಿದ್ದರೆ ಧರ್ಮಸ್ಥಳಕ್ಕೆ ಮುಡಿಪು; ತಿರುಪತಿಗೆ ಈಡು...." ಹೀಗೆಂದು

ಒಂದು ನ್ಯಾಯಸ್ಥಾನದಿಂದ ಇನ್ನೊಂದಕ್ಕೆ ಮೇಲರಿಕೆ (ಅಪೀಲ್) ಮಾಡು ವಂತೆ, ಹರಿಕೆಗಳ ಮೇಲೆ ಹರಿಕೆ ಸಲಿಸಿ, ರೋಗಗಳ—ಅವುಗಳೊಂದಿಗೆ ವೈದ್ಯರೆಲ್ಲರ—ಗರ್ವವನ್ನಿಳಿಸಬೇಕೆಂದು ನೈಜವಾದ ಆಸ್ತಿಕ ಬುದ್ಧಿಗೆ ಸರಿಯಾಗಿ ತಿಳಿಸಿದಳು ವೆಂಕಮ್ಮ. ಅವಳ ಭಕ್ತಿಯೇನೋ ಅಪಾರ. ಭಕ್ತಿ ಇದ್ದುಕೊಳ್ಳಲಿ; ಅದರ ಜೊತೆಯಲ್ಲಿ ನಮ್ಮ ಬಡ ಡಾಕ್ಟರರನ್ನು ಕರೆಸಿದರೇನು? ಎಂದು ನನಗೆ ತೋರುತ್ತಿತ್ತು. ಅವರು ಸತ್ಯನಾರಾಯಣ ರಲ್ಲ; ಬರಿಯ ನಾರಾಯಣರಾಯರು. ಸಪಾದ ಭಕ್ಷ್ಯದಷ್ಟು ದೊಡ್ಡ ಪಿಂಡವನ್ನಲ್ಲ; ಒಂದು ಚಿಕ್ಕ ಗುಳಿಗೆಯನ್ನು ಕೊಡಬಲ್ಲರು. ಕುಡು ತೆಯ ಪ್ರಮಾಣದಲ್ಲಿ ಪಂಚಾಮೃತ ಕೊಡಲು ಶಕ್ತರಲ್ಲ; ಆದರೂ ಚಮ ಚದ ಅಳತೆಯಲ್ಲಿ ಮಿಶ್ರಣಗಳನ್ನು ಕೊಡಬಲ್ಲರು. ಕೊಟ್ಟರೆ ಆಗಬಹು ದಿತ್ತು ಎಂದು ನನ್ನ ಆಗ್ರಹವಿತ್ತು. ಆ ದಿನ ಕಚೇರಿಗೆ ಹೋಗುವು ದಂತೂ ಅಸಾಧ್ಯ. ಸತ್ಯನಾರಾಯಣ ಅಷ್ಟು ಕೆಲಸಮಾಡಿದ್ದ. ರಜೆ ಚೀಟನ್ನು ಬರೆದು ಕಳುಹಿಸಬೇಕೆಂದು ವೆಂಕಮ್ಮನನ್ನು ಅಲ್ಲೆ ಬಿಟ್ಟು ನನ್ನ ಕೋಣೆಯೊಳಕ್ಕೆ ನಡೆದೆ.

ಕಾಗದವನ್ನು ಬರೆದು ಮುಗಿಸಿ ಲಕೋಟೆಯೊಳಗೆ ತುರುಕಿಸು ತ್ತಿದ್ದೆನಷ್ಟೆ. "ಅಪ್ಪಾ ಅಪ್ಪಾ! ಅಮ್ಮ ಎದ್ದು ಓಡುತ್ತಾಳೆ!" ಎಂದೊಂದು ಚೀರಾಟ ಕೇಳಿಸಿತು.

ಒಳಗೆ ಹೋಗಿ ನೋಡುತ್ತೇನೆ; ವೆಂಕಮ್ಮನ ಮೂರ್ತಿ ಭಯಂಕರ! ಎದ್ದು ನಿಂತು, ಔಡು ಕಚ್ಚಿ, ಕಣ್ಣು ಕೆರಳಿಸುತ್ತಾ "ಸತ್ಯನಾರಾಯಣ.... ಜಗದೀಶ್ವರ! ನೀನೆ ನನ್ನ ಬಂಧು....ನೀನೇ ನನ್ನ ಪ್ರಾಣರಕ್ಷಕ.... ನಿನ್ನ ಪ್ರಸಾದದಿಂದಲೇ ಬದುಕುತ್ತೇನೆ........ಕೊಡು........ಮಣಕಟ್ಟಲೆ ಕೊಡು........ಖಂಡಿಗಟ್ಟಲೆ ಕೊಡು........ ಶಾಸ್ತ್ರಿಗಳೇ ಬನ್ನಿ........ ಸತ್ಯ ನಾರಾಯಣನಿಂದ ಪ್ರಸಾದ ತನ್ನಿ....ತಾರದಿದ್ದರೆ ನಿಮ್ಮ ಮೂವತ್ತೆರಡು ಹಲ್ಲುಗಳನ್ನೂ ಉದುರಿಸುತ್ತೇನೆ;" ಎಂದು ಆರ್ಭಟಿಸಿ, ಮುಷ್ಟಿ ಬಲಿದು ನಿಂತಿದ್ದಳು ವೆಂಕಮ್ಮ. ಭ್ರಾಂತಿಯ ವಿಷಯದಲ್ಲಿ ನನಗೇನೂ ಭೀತಿ ಯಿದ್ದಿರಲಿಲ್ಲ. ಆಕೆಯ ಸ್ವಾಭಾವಿಕ ಪ್ರಕೃತಿಗೂ ಈ ಭ್ರಾಂತಿಗೂ ಎಷ್ಟು ವ್ಯತ್ಯಾಸವಿತ್ತೆಂಬುದನ್ನು ತಿಳಿದು ಹೇಳುವುದು ಕಷ್ಟ. ಕಣ್ಣಿನ ಕೆರಳಿಕೆ.... ಹುಬ್ಬಿನ ಹೊಡೆತ.... ಮೊದಲಾದ ಒಂದೆರಡು ಚಿಹ್ನೆಗಳ

ಲ್ಲದೆ ಉಳಿದುವೆಲ್ಲ ಯಥಾಸ್ಥಿತಿಯವುಗಳೆ ಆಗಿದ್ದುವು. ಮಾತು ದಾರಿ ತಪ್ಪಿದೆ ಎಂದು ಉಳಿದವರು ಹೇಳಬಹುದು. ಆದರೆ, ಆಕೆಯ ಮಾತಿನ ದಾರಿಯ ಬಳಿಯಲ್ಲಿಯೇ ನಿಂತು ನೋಡಿ ಅನುಭವವಾಗಿದ್ದ ನನಗೆ, ಮಾತಿನ ಹುಚ್ಚು ದೊಡ್ಡದಾಗಿ ತೋರಲಿಲ್ಲ. ಹುಚ್ಚನ್ನು ವಿಚಿತ್ರ ಸ್ವಭಾವ ವೆಂದು ಭಾವಿಸಿ, ಆ ಹುಚ್ಚನ್ನೂ ಹುಚ್ಚನ್ನು ಹೊಂದಿದ್ದ ವೆಂಕಮ್ಮನನ್ನೂ ಒಟ್ಟಾಗಿ ಉಳಿಸುವುದು ಹೇಗೆ? ಎಂಬುದು ನನಗೆ ತೋರದಾಯಿತು; ಇಪ್ಪತ್ತು ವರ್ಷದಿಂದ ಜೀವದ ಸಹಚರಿಯಾಗಿ ಬಂದಾಕೆ! ನನ್ನ ಕಣ್ಣು ಗಳಲ್ಲಿ ನೀರು ತುಂಬಿತು.

ಜ್ವರದ ಘೋರತೆಯ ವಿಷಯದಲ್ಲಿ ನನಗೆ ಸಂದೇಹವೇನೂ ಇರ ಲಿಲ್ಲ "ತಾಯಿಯನ್ನು ಸ್ವಲ್ಪಕಾಲ ನೋಡಿಕೊ........ಕೂಡಲೆ ಬರುತ್ತೇನೆ. ಕೋಣೆಯೊಳಗೆ ಆಕೆಯನ್ನಿರಿಸಿ ಹೊರಗಿನಿಂದ ಸಂಕಲೆ ಹಾಕಿ ಹೋಗು ತ್ತೇನೆ........ಜಾಗ್ರತೆ........ಹೊರಗೆ ಬರಬಿಡ ಬೇಡ........ಇಲ್ಲಿಯೇ ಕುಳಿ ತಿರು" ಎಂದು ಕಣ್ಣೀರನ್ನೊರಸಿಕೊಳ್ಳುತ್ತಾ ಬೀದಿಗಿಳಿದೆ.

ಡಾಕ್ಟರರು ಬಂದರು. ಮನೆಯ ಅಂಗಳಕ್ಕೆ ಬರುವಾಗಲೇ ಭಯಂಕರ ಗರ್ಜನೆ. ಆಗ ಶಾಸ್ತ್ರಿಗಳ ಹಲ್ಲುಗಳಿಗೆ ಮಾತ್ರ ಅಪಾಯ ವಿತ್ತು. ಈಗ ಸತ್ಯನಾರಾಯಣನಿಗೆ ಹಲ್ಲುಗಳಿದ್ದರೆ, ಅವಕ್ಕೂ ಪತನ ಕಾಲ ಬಂದಂತೆ ತೋರಿತು.

ಮೆಲ್ಲನೆ ಬಾಗಿಲ ಸಂಕಲೆ ತೆಗೆದು ಒಳಹೊಕ್ಕೆವು.

"ಯಾರದು....ಪರ ಪುರುಷರು?"

"ಯಾರೂ ಅಲ್ಲ. ನಾನು....ನಿನ್ನ ಗಂಡ....ಇವರು...."

"ಇವರು ಯಾರು?"

"ಡಾಕ್ಟರರು...."

"ಡಾಕ್ಟಾರರು? ಅವರಿಗೆ ಇಲ್ಲೇನು ಕೆಲಸ...."

"ಔಷಧ ಕೊಡು...."

"ಯಾರಿಗೆ?...."

"ವೆಂಕಮ್ಮ...."

"ವೆಂಕಮ್ಮನಿಗೆ ಮದ್ದುಕೊಡುವ ಡಾಕ್ಟರನೆ ಈ ಕಪಿರಾಯ?.... ನನ್ನನ್ನು ಬದುಕಿಸುವ ವೈದ್ಯ ಅಲ್ಲಿದ್ದಾನೆ....ಹ ಹ್ಹ ಹ್ಹಾ. ಈ ಕಪಿ

ರಾಯ...." ಎಂದು ಡಾಕ್ಟರರ ಸಾಲಂಕೃತ ವೇಷವನ್ನು ನೋಡಿ ನಕ್ಕಳು.

ಡಾಕ್ಟರರಿಗೂ ನಗು ಬಂತು. ತಲೆಯ ಮೇಲಿನ ಹೇಟನ್ನು ತೆಗೆದಿರಲಿಲ್ಲ. ಅದನ್ನು ಕಂಡು, ಯಾವುದೋ ಒಂದು ಬಯಲಾಟದ ಕಪಿರಾಯನ ವೇಷದ ನೆನಪು ಬಂದಿದ್ದಿರಬೇಕು.

"ಅಮ್ಮಾ! ನಿಮಗೆ ಸುಖವಿಲ್ಲ....ಜ್ವರ ಬರುತ್ತಿದೆ....ಶರೀರ ಪರೀಕ್ಷೆಯಾಗಬೇಕಾಗಿದೆ. ನಾನು ಡಾಕ್ಟರರು...."

"ಮೂರ್ಖ! ಪರಸ್ತ್ರೀಯನ್ನು ಪರೀಕ್ಷಿಸಬಂದೆಯಾ?" ಎಂದು ಗರ್ಜಿಸಿದಳು ಆ ಪತಿವ್ರತೆ....ನನ್ನ ಕಣ್ಣಿನಲ್ಲಿ ಗಂಗೋದ್ಭವವಾಯಿತು.

"ನಿಮ್ಮ ಕೈ ನೋಡೋಣ."

"ನನ್ನ ಕೈಯನ್ನು ಕೊಟ್ಟದ್ದು ಇವರೊಬ್ಬರಿಗೆ ಮಾತ್ರ; ನಿಮ್ಮ ಹಲ್ಲು ಗಟ್ಟಿಯಾಗಿದೆಯೋ ನೋಡಿಕೊಂಡು....ಪರೀಕ್ಷೆಗೆ ಹೊರಡಿ."

ಇಷ್ಟು ಹೇಳಿಕೊಂಡೇ ಥಟ್ಟನೆ ಬಾಗಿಲಿನಿಂದ ಹೊರಗೋಡಲು ಪ್ರಯತ್ನಿಸಿದಳು. "ವೆಂಕಮ್ಮ........ವೆಂಕಮ್ಮ........ ಡಾಕ್ಟರರಿವರು ಮದ್ದು ಕೊಡಲು ಬಂದಿದ್ದಾರೆ....ನಿನ್ನನ್ನು ಬದುಕಿಸ ಬಂದಿದ್ದಾರೆ.... ಎಂದು ಅಡ್ಡಗಟ್ಟಿ ನಿಂತೆ.

"ಹೊಲೆಯರು........ಹಸಿಮಾಂಸ ತಿನ್ನುವವರು........ಅರೆಯುವ ಕಲ್ಲನ್ನು ತಲೆಯಲ್ಲಿಡುವವರು....ಬೀದಿ ಬೀದಿ ತಿರುಗುವ ಜೇವರ್ಸಿಗಳು....ಇವರನ್ನು ಈ ಮನೆಯೊಳಗೆ ಕರೆತಂದಿರಿ; ಇಲ್ಲಿ ದೇವರು ನಿಂತಾನೇ? ಅವನೂ ಓಡುತ್ತಾನೆ....ನಾನೂ ಓಡುತ್ತೇನೆ....ಬಾವಿಗೆ ಹಾರಿ ತಣ್ಣೀರಲ್ಲಿ ಮುಳುಗಿ ಶುದ್ಧದಲ್ಲಿ ಸಾಯುತ್ತೇನೆ" ....ಆಕೆಯ ಆಚಾರನಿಷ್ಠೆಯು ಶರೀರದ ಅಶಕ್ತಿಯನ್ನು ಹಿಂದೆ ಹಾಕಿ, ಭ್ರಾಂತಿಯನ್ನೂ ಒಂದು ನಿಮಿಷಕ್ಕೆ ಹಿಮ್ಮೆಟ್ಟಿಸಿ ಯಥಾರೂಪದಲ್ಲಿ ತೋರಿಸಿಕೊಳ್ಳುವಂತಿತ್ತು.

ಡಾಕ್ಟರರು ನಗುತ್ತಾ ಹೇಳಿದರು "ಕೃಷ್ಣಯ್ಯ! ನಾನು ಪರೀಕ್ಷಿಸಬೇಕಾದ ವಿಷಯವೇನೂ ಇಲ್ಲ. ಮುಖ ನೋಡುವಾಗಲೆ ಗೊತ್ತಾಗುತ್ತದೆ....ಸನ್ನಿಪಾತ....ವಿಷವೀಗ ತಲೆಗೇರಿದೆ. ಇದು ಜ್ವರದ ಚಟುಪಟಿಕೆಯಲ್ಲದೆ ಬುದ್ಧಿಯದಲ್ಲ. ನಾನು ಔಷಧ ಕೊಡಬಹುದು; ಇವರು

ಕುಡಿಯಬೇಕಲ್ಲವೆ? ಶುಶ್ರೂಷೆ ಬಹಳ ಚೆನ್ನಾಗಿರಬೇಕು; ಮಲಗಿದಲ್ಲಿಂದ ಏಳಬಿಡಬಾರದು. ಇಷ್ಟೆಲ್ಲ ಇಲ್ಲಿ ಸಾಧ್ಯವೆ? ಹೆಂಗುಸರ ಆಸ್ಪತ್ರೆಗೆ ಒಯ್ಯಿರಿ....ಸನ್ನಿಪಾತ ಜ್ವರದಲ್ಲಿ ಕೊನೆವರೆಗೆ ಖಂಡಿತವಾಗಿ ಹೇಳಬರುವುದಿಲ್ಲ. ನಾಡಿ ನಿಂತಂತೆ ತೋರಿದ ಮೇಲೆ ಬದುಕುವವರಿದ್ದಾರೆ.... ಅಪಾಯವೇನೂ ಇಲ್ಲ ಎನ್ನುವ ಸ್ಥಿತಿಯಲ್ಲಿ ಎದ್ದು ಹೋಗುವವರಿದ್ದಾರೆ...."

ಪ್ರಾಯ ಬಂದ ಮೇಲೆ ನಾನು ಚಿಕ್ಕ ಮಗುವಿನಂತೆ ಅತ್ತುದು ಆ ದಿನ ಮಾತ್ರ....

ವೆಂಕಮ್ಮನ ಹುಚ್ಚು ಮತ್ತಷ್ಟು ಪ್ರಕೋಪಹೊಂದಿತು. ಆಸ್ಪತ್ರೆಗೆ ಒಯ್ಯಬೇಕೆಂದು ಮೋಟರ್ ಬಂಡಿ ತರುವಷ್ಟರಲ್ಲಿ ಸ್ಮೃತಿ ಕೆಟ್ಟಂತೆ ತೋರಿತು. ಏನೋ ಅವ್ಯಕ್ತ ಶಬ್ದಗಳು ಬಾಯಿಯಿಂದ ಹೊರಡುತ್ತಿದ್ದುವು. "ಕಾಲ........ಕಲಿಯುಗ........ಮಡಿ........ ಮೈಲಿಗೆ........ದೇವರು ........ ಧರ್ಮ....ನೀತಿ...." ಹೀಗೆ ಒಂದೊಂದು ಶಬ್ದ ಸ್ಪಷ್ಟವಾಗಿ ಕೇಳಿಸುತ್ತಿದ್ದುದರಿಂದ, ಕಲಿಕಾಲದ ಕಲ್ಮಷದಿಂದ ಹಾಳಾದ ಪ್ರಪಂಚವನ್ನು ಕಂಡು ಆ ಸದಯ ಜೀವ ಮರುಗುತ್ತಿದ್ದಿರಬೇಕೆಂಬುದು ಸ್ಪಷ್ಟವಾಯಿತು.

ಆಸ್ಪತ್ರೆಯ ಡಾಕ್ಟರರು ದೀರ್ಘಕಾಲ ಪರೀಕ್ಷೆಮಾಡಿ ಹೀಗೆ ತೀರ್ಪು ಕೊಟ್ಟರು. "ಟಯರು ಒಡೆದುಹೋದ ಮೋಟರಿನ ಗಾಲಿ ಏನಾದೀತು ಹೇಳಿ....ಹಾಗೆಯೆ ಇವರ ಸ್ಥಿತಿ ಎಂದು ಭಾವಿಸಿಕೊಳ್ಳಿ. ಕಾಲಹರಣ ಮಾಡಬಹುದಷ್ಟೆ. ಡಾಕ್ಟರರು ಏನಾದರೂ ಮಾಡಬಹುದೆಂದರೆ, ಅದಕ್ಕೆ ಅವಕಾಶಕೊಟ್ಟವರೇ ಇಲ್ಲ. ಅಪಥ್ಯದಿಂದ ರೋಗವು ಪ್ರಕೋಪಿಸಿದೆ. ಒಣಮರಕ್ಕೆ ಹಿಡಿದ ಬೆಂಕಿಯಂತೆ ಈ ವಿಷದ ವೇಗ ಏರುತ್ತದೆ. ಯಾರೇನು ಮಾಡಬಹುದು ಕೃಷ್ಣಯ್ಯನವರೇ?"

ಇನ್ನು ನಾನು ಮಾಡಬೇಕಾಗಿದ್ದ ಕರ್ತವ್ಯವೇನೆಂದು ಯಾರೂ ಉಪದೇಶಿಸಬೇಕಾಗಿರಲಿಲ್ಲ. ಆಕೆಯ ಧರ್ಮ ವಿಶ್ವಾಸವು ಅಚಲ; ಅದನ್ನು ಪಾಲಿಸುವುದಕ್ಕೆ ಆವಳು ಈ ಪಾರ್ಥಿವ ಪ್ರಪಂಚದ ಯಾವ ಸಂಕಟಗಳನ್ನಿದಿರಿಸುವುದಕ್ಕೂ ಹಿಂಜರಿದಿರಲಿಲ್ಲ. ಪ್ರಾಚೀನ ಪದ್ಧತಿಯ ಬಾಹ್ಯಾವರಣದೊಳಗೆ ಯೋಗಸಿದ್ಧವಾದ ಮನಸ್ಸೊಂದು ಆಕೆಯ ವಿಲಕ್ಷಣ ಸ್ವಭಾವಕ್ಕೂ ಒಂದು ಬಗೆಯ ಪೂಜ್ಯತೆಯನ್ನು ಕೊಡುತ್ತಿತ್ತು. ತನ್ನ ಅಭಿಪ್ರಾಯ ವ್ಯವಹಾರ ಸ್ವಾತಂತ್ರ್ಯಕ್ಕಾಗಿ ಆವಳು ಏನೆಲ್ಲ

ಮಾಡಲಿಲ್ಲ? ಯಾರೊಡನೆ ಹೋರಾಡಲಿಲ್ಲ? ಗಂಡನೊಡನೆ ಸೆಣಸಿದಾಗಲೂ, ತನ್ನ ಕರ್ತವ್ಯಪ್ರೀತಿಯ ಕಾರಣದಿಂದಲೇ ಹಾಗೆ ಮಾಡಿದಳಲ್ಲದೆ, ಬಾಯಿಯ ವಾಸನೆಯನ್ನು ಕಳೆಯುವುದಕ್ಕಲ್ಲ........ಎಂಥ ಸುಂದರ ಜೀವ........ಪ್ರಪಂಚದಲ್ಲಿ ಇಂತಹ ಸ್ತ್ರೀಯರ ಸಂಖ್ಯೆ ಎಷ್ಟಿರಬಹುದು? ಆ ದಿನ ಗೊತ್ತುಗುರಿಯಿಲ್ಲದ ಪಿಶಾಚಿಯಂತಿದ್ದೆ ನಾನು. ಕೊನೆಗೆ ವೆಂಕಮ್ಮ ಹೇಗೆ ಧೈರ್ಯದಿಂದಲೆ ಈ ಪ್ರಪಂಚದಲ್ಲಿದ್ದು, ಸಾಯುವ ಕಾಲದಲ್ಲಿಯೂ ಅದೇ ಕೆಚ್ಚೆದೆಯುಳ್ಳವಳಾಗಿದ್ದಳೋ, ಹಾಗೆಯೇ ನಾನೂ ಇರಬೇಕೆಂದು ಸಂಕಲ್ಪಿಸಿದೆ. ಆಸ್ಪತ್ರೆಯ ಹೀನ ಜನರ ಸ್ಪರ್ಶದಿಂದ ಅವಳ ಶರೀರವು ಮೈಲಿಗೆ ಹೊಂದಬಾರದೆಂದು ರಾತ್ರಿಯಲ್ಲಿ ಮನೆಗೆ ಕರೆದುಕೊಂಡು ಬಂದೆ. ಮನೆಯನ್ನೆಲ್ಲ ಶುದ್ಧಮಾಡಿ ಹೊಸ ಪಟ್ಟೆಯ ಮಡಿಯೊಂದನ್ನು ಕೊಂಡುಕೊಂಡು ಅದನ್ನೆ ಹಾಸಿಗೆಯ ಮೇಲೆ ಹಾಸಿ, ಅದರ ಮೇಲೆ ಆಕೆಯ ಶರೀರವನ್ನು ಒರಗಿಸಿದೆ.

ಇತ್ತೀಚೆಗೆ ಬೋಧವಿಲ್ಲದಿದ್ದ ಆಕೆಗೆ ಆಗತಾನೆ ಚೇತರಿಕೆಯುಂಟಾಯಿತು. ಹಾಳಾದ........ಪ್ರಪಂಚ....ಮಡಿಮೈಲಿಗೆ....ಜಾತಿನೀತಿಗಳನ್ನು ತಿಳಿಯದ ಪ್ರಪಂಚ........ಇದರಲ್ಲಿ ಜಿಗುಪ್ಸೆಪಟ್ಟು ಬಲು ದೂರ ನಡೆದಿದ್ದಾಕೆ ಹಿಂತಿರುಗಿ ನೋಡಿದಂತೆ ನನ್ನ ಕಡೆಗೆ ಮುಖ ತಿರುಗಿಸಿದಳು. ಅವಳ ಕೊನೆಯ ಗಳಿಗೆಯಲ್ಲಿಯಾದರೂ ಅವಳ ಶುದ್ಧಾಚಾರದ ತತ್ತ್ವವನ್ನು ನಾನು ಅಂಗೀಕರಿಸಿದುದರಿಂದ ಉಂಟಾದ ತೃಪ್ತಿ ಅವಳ ಅರೆಮರವೆಯ ಮುಸುಕು ಬುದ್ಧಿಯನ್ನು ಕುಲುಕಾಡಿರಬೇಕು. ತನಗೆ ತನ್ನ ಮನೆಯೊಳಗಾದರೂ ಆದ ತಾತ್ವಿಕ ಜಯವು, ಸುಪ್ತ ಜೀವವನ್ನು ಎಬ್ಬಿಸಿರಬೇಕು. ಆಕೆ ಕ್ಷೀಣಸ್ವರದಲ್ಲಿ ಏನೇನೋ ಹೇಳತೊಡಗಿದಳು.

"ಹತ್ತಿರ ಇದ್ದೀರೋ...."

"ಹೌದು."

"ಸ್ನಾನಮಾಡಿದ್ದೀರೋ ..."

"ಹೌದು."

"ಹೋಗಿಬರುತ್ತೇನೆ....ಬಾಯಿಗೆ ಗಂಗೋದಕ ಬಿಡಿ...."

"ಎಲ್ಲಿಗೆ ಹೋಗಿಬರುತ್ತಿ ವೆಂಕಮ್ಮ?" ಎಂದು ನಾನು ಅಳುವುದಕ್ಕೆ ಪ್ರಾರಂಭಿಸಿದೆ.

"ಅಲ್ಲಿಗೆ....ದೇವರಿರುವಲ್ಲಿಗೆ...."

"ಹೆಂಡತಿಗೆ ಪತಿಯೆ ದೇವರಲ್ಲವೆ?"

"ಹೌದು....ಆದರೆ ಯಾವ ಹೆಂಡತಿ ಹಾಗೆ ಭಾವಿಸುತ್ತಾಳೆ? ಯಾವ ಗಂಡ ಹಾಗೆ ನಡೆಯುತ್ತಾನೆ....ಅದೆಲ್ಲ ಹೇಳುವುದಕ್ಕೆ ಲೇಸು, ಮಾಡುವುದಕ್ಕೆ...."

ಹೌದು; ಅನೇಕ ತತ್ವಗಳನ್ನು ನಾವು ಹೇಳುತ್ತೇವೆ. ನಾಲಗೆಯೊಂದಿಗೆ ಕೈತಿರುಗುವುದಿಲ್ಲ....ವೆಂಕಮ್ಮನೋ....ಅವಳ ರೀತಿಯೇ ಬೇರೆ....ಮಾತೂ ನಡತೆಯೂ ಒಂದಾಗಿ, ಇಪ್ಪತ್ತು ವರ್ಷ ನನ್ನ ಒಡನಾಡಿಯಾಗಿ ಬಂದಿದ್ದಾಳೆ....ತನ್ನ ನಡತೆಯನ್ನು ಮೆಚ್ಚದ ನೆಲದಲ್ಲಿ ಅವಳು ಹೇಗೆ ಜೀವಿಸಬಲ್ಲಳು....?

"ಯಾರೋ ಬರುತ್ತಾರೆ......ಮುಡಿಯುಟ್ಟಿದ್ದಾರೆ.......ಗಂಧಾಕ್ಷತೆ ಹಾಕಿಕೊಂಡಿದ್ದಾರೆ.....ದೇವಲೋಕದ ದೂತರು.....ಕರೆಯುತ್ತಾರೆ..... ಹೋಗುತ್ತೇ....ನೆ" ನಾಲಗೆ ಏನೇನೋ ಹೇಳತೊಡಗಿತು.

ನನ್ನ ಇಡೀ ಶರೀರವು ಕಂಪಿಸುತ್ತಿತ್ತು.

"ನಾರಾಯಣ........ಏಳು ವರ್ಷ........ಉಪನಯನ ಸಂಧ್ಯಾವಂದನೆ........ಸಂಸ್ಕೃತ........" ಹೀಗೆ ನನಗೇನೋ ತಿಳಿಯಬೇಕೆಂದು ಗೊಣಗುಟ್ಟಿದ್ದಳು.

"ನಿನ್ನ ಒಂದಕ್ಷರವನ್ನು ಮೀರುವಹಾಗಿಲ್ಲ...." ಎಂದು ಉಚ್ಚಸ್ವರದಲ್ಲಿ ಅಳತೊಡಗಿದೆ....

"ಆ........ಗಲಿ........ಸುಖವಾಗಿರಿ........" ಎಂಬ ಕೊನೆಯ ಮಾತುಗಳನ್ನು ಆಡುವಂತೆ ತುಟಿಯಲ್ಲಾಡುತ್ತಿತ್ತು. ಮತ್ತೆ ಎರಡು ನಿಮಿಷ ಶ್ವಾಸಸಂಚಾರದ ರಭಸ ಹೆಚ್ಚಿತು; ಕೊನೆಗೆ ತನ್ನಿಂದ ತಾನೆ ನಿಂತಿತು....

"ವೆಂಕಮ್ಮ....ವೆಂಕಮ್ಮ....ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ?" ಎಂದು ಗೋಳಿಟ್ಟೆ.

ಉತ್ತರವಿಲ್ಲ; ಹೊಡೆವ ಗಡಿಯಾರ ಹೊಡೆಯಲಿಲ್ಲ; ಮೂಕವಾಗಿತ್ತು. ಎದೆ ಅಲ್ಲಾಡದಿತ್ತು. ಒಳಗಣ ಯಂತ್ರವೇನೋ ಸುತ್ತಿ ಸಿಕ್ಕುಗಟ್ಟಿ ಕಡಿದುಬಿದ್ದಂತಿತ್ತು. ನನ್ನ ಮಟ್ಟಿಗೆ ಇಡಿ ಪ್ರಪಂಚಕ್ಕೆ ಹೃದಯಸ್ತಂಭನವಾದಂತೆ ತೋರಿತು.

ಕೆಲವೆ ದಿನಗಳ ಹಿಂದೆ ಮನೆಯೊಳಗೆ ಹೊಡೆಯುವ ಗಡಿಯಾರ ವಿತ್ತು; ಆಕೆ ಇದ್ದಾಗ ಒಂದು ಮನೆಯಿತ್ತು. ಮನೆಯ ಕೋಣೆ ಕೋಣೆ ಯೊಳಗೆ ಜೀವದ ಸುಳಿವಿತ್ತು. ಪ್ರತಿಯೊಂದು ಅಚ್ಚುಕಟ್ಟಾಗಿ, ನಯ ದಿಂದ, ನಾಜೂಕಿನಿಂದ, ನಡೆಯುತ್ತಿತ್ತು. ಇಂದೋ ಸದ್ದಿಲ್ಲ! ಎಲ್ಲ ಶೂನ್ಯ....ಕಚೇರಿಯಿಂದ ಬಂದು ಮನೆಗೆ ಕಾಲಿಡುವಾಗ—ನಡೆಯಿರಿ ಬಚ್ಚಲುಕೋಣೆಗೆ; ಸ್ನಾನಮಾಡಿ ಫಲಾಹಾರಕ್ಕೆ ಬನ್ನಿ—ಎಂಬ ಗರ್ಜನೆ ಎಲ್ಲಿಂದ ಕೇಳಿಬರಬೇಕು? ಇಂದು ಬೇಕೆಂದು ಬೇಡಿದರೆ ಅಂತಹ ಗರ್ಜನೆ ಯಿಂದ ನನ್ನನ್ನು ಎಚ್ಚರಿಸುವವರು ಯಾರು? ನಾನೊಬ್ಬ ಮನುಷ್ಯನೆಂದು ಮಾತಾಡಿಸಲು ಅಪೇಕ್ಷಿಸುವ ಪ್ರಾಣಿಯೊಂದು ಮನೆಯೊಳಗಿಲ್ಲ.... ಇಂದು ಮನೆ ಶೂನ್ಯ; ಮನಸ್ಸು ಶೂನ್ಯ: ಶೂನ್ಯವು ಶೂನ್ಯದೊಡನೆ ಮಾತಾಡುತ್ತಿದೆ!



# ಕೈದಿ

ಕೆಲದಿನಗಳಿಂದಿತ್ತ ನಗರದಲ್ಲಿ ಕೇಳಿ ಬರುತ್ತಿದ್ದ ಸುದ್ದಿ ಇದೊಂದೆ: ಒಂದು ಸಂಧ್ಯಾಕಾಲದಲ್ಲಿ ಕಿರುಬೀದಿಯಲ್ಲಿ ಹೋಗುತ್ತಿದ್ದ ಚೆಲುವೆಯೊಬ್ಬಳ ಮಾನಾಪಹಾರ ಮಾಡಬೇಕೆಂದು ಯಾವನೋ ಒಬ್ಬ ಪುಂಡ ಪ್ರಯತ್ನಿಸುತ್ತಿದ್ದಾಗ, ಜಮೀನುದಾರ ಸುಬ್ಬಯ್ಯನವರ ಮಗ ಅದೇ ದಾರಿಯಲ್ಲಿ ಹಾದುಹೋಗುತ್ತಿದ್ದು ಪರಿಸ್ಥಿತಿಯನ್ನು ಕಂಡ; ಗುರಿಗೆ ಎಸೆದ ಬಾಣದಂತೆ ಅತ್ಯಾಚಾರವಾಗಬಹುದಾಗಿದ್ದ ಸ್ಥಳಕ್ಕೆ ಹಾರಿದ; ದುರುಳನ ಮೇಲೆ ಬಿದ್ದ. ಆತ ಸುಬ್ಬಯ್ಯನವರ ಮಗನನ್ನೂ ಅವನ ಸಹಾಯಕ್ಕಾಗಿ ಆಗ ತಾನೇ ಬಂದಿದ್ದ ಮತ್ತಿಬ್ಬರು ತರುಣರನ್ನೂ ಒದೆದು ನೆಲಕ್ಕುರುಳಿಸಿ ಪಲಾಯನ ಮಾಡಿದ. ಸುಬ್ಬಯ್ಯನವರ ಮಗನಿಗೆ ಗಾಯವಾಗಿತ್ತು; ಮೂಗು ಒಡೆದು ರಕ್ತ ಸುರಿಯುತ್ತಿತ್ತು. ದೊಡ್ಡವರ ಮಗನಾದರೇನಾಯಿತು? ಅಬಲೆಯ ಮಾನರಕ್ಷಣೆ ಮಾಡಬೇಕಾಗಿದ್ದಾಗ ಮೈಯನ್ನು ಹಿಂದೆಳೆದನೆ? ರಸ್ತೆಯಲ್ಲಿ ಮೂರ್ಛೆಹೋಗಿದ್ದಾತನಿಗೆ ಆಸ್ಪತ್ರೆಯ ಸುಖಶಯ್ಯೆಯಲ್ಲಿಯೇ ಎಚ್ಚರವಾದುದು. ಬೋಧೆ ಬಂದೊಡನೆ ಆತ ಕೇಳಿದ ಪ್ರಶ್ನೆ ಒಂದೇ ಒಂದು–''ಹುಡುಗಿಯ ಗತಿಯೇನಾಯಿತು?" ಎಂಬುದು. ಆಕೆ ಸುರಕ್ಷಿತವಾಗಿದ್ದಾಳೆ, ಎಂದು ತಿಳಿದ ಮೇಲೆ ತಾನೆ, ಆತನು ಔಷಧ ಸೇವನೆ ಮಾಡಿದುದು; ಶ್ರೀಮಂತರ ಸೀಮಂತ ರತ್ನವಲ್ಲವೆ ಸುಬ್ಬಯ್ಯನವರ ಮಗನೆಂದರೆ? ಇಡಿ ನಗರವು ಕೈಚಪ್ಪಾಳೆ ಹೊಡೆದು ಅವನನ್ನು ಕೊಂಡಾಡಿತು.

ಒಬ್ಬಳು ಹುಡುಗಿ ಹೇಗೋ ಸತ್ತು ಹುಟ್ಟಿ ಬಂದಳು. ಉಳಿದವರ ಪಾಡೇನು? ನಗರದಲ್ಲಿ ಕನ್ಯಾಪಹಾರಿಗಳ ತಂಡವೊಂದು ಅಲೆದಾಡುತ್ತಿದೆ. ದಾರಿ ತಪ್ಪಿದ ಕೆಲ ತರುಣರು ನಾಡಾಡಿಗಳಾದ ಪುಂಡರನ್ನು ಕಟ್ಟಿಕೊಂಡು ಊರನ್ನೆ ಗೋಳುಗೊಳಿಸುತ್ತಿದ್ದಾರೆ. ಪೋಲೀಸರ ಕಣ್ಣಿಗೆ ಸಿಕ್ಕುವುದಿಲ್ಲ; ಪರಿಚಿತರಿಗೆ ಮುಖ ಕಾಣಿಸುವುದಿಲ್ಲ. ಸಭ್ಯರಂತೆ ನಟಿಸಿ, ಸಂದರ್ಭ ದೊರೆತೊಡನೆ ತಮ್ಮ ದುರಾಚಾರಕ್ಕೆ ಇಳಿಯುತ್ತಾರೆ. ಪ್ರಾಯಕ್ಕೆ ಬಂದ ಹುಡುಗಿಯರ ತಂದೆ ತಾಯಿಗಳ ಎದೆಯಲ್ಲಿ ತಲ್ಲಣವು

ತಲೆದೋರಿತು; ಮಾತ್ರವಲ್ಲ ಯಾರೂ ಹೇಳದೆ ಕೇಳದೆ ಎಷ್ಟೋ ಮಂದಿ ಗತಿಗೆಡುವಂತಾಯಿತು—ಎಂದು "ಯಥಾರ್ಥ" ಸ್ಥಿತಿಯ ಪರಿಜ್ಞಾನವಿದ್ದ ಅನುಭವಶಾಲಿಗಳು ಸಾರಿ ಹೇಳಿದರು.

ಕೊನೆಗಂತೂ ಅಪರಾಧಿಯೊಬ್ಬನ ತುಬ್ಬಾಯಿತು. ವಿಚಾರಿಸಲಾಗಿ ಅವನೆ ಈ ಪುಂಡರ ಮುಖಂಡನೆಂದೂ ತಿಳಿದುಬಂತು. ಉಳಿದವರನ್ನು ಪತ್ತೆಮಾಡಿ ಮಾಡಿ ಬೇಸತ್ತ ಪೊಲೀಸರು, ಇವನೊಬ್ಬನನ್ನು ದಿಗ್ಬಂಧಿಸಿದರೆ ಸಕಲ ಪೀಡೆಗಳೂ ಪರಿಹಾರಹೊಂದುವುವೆಂದು ದೃಢ ವಿಶ್ವಾಸದಿಂದಿದ್ದರು.

ಕೈದಿಯನ್ನು ನಗರದ ಸೆರೆಮನೆಗೆ ತಂದ ಕಾಲದಲ್ಲಿ ಸೆರೆಮನೆಯ ಅಧಿಕಾರಿ ಶಂಭು ಲಿಂಗಯ್ಯನಿಗೆ ಜೀವದಲ್ಲಿ ಜೀವವಿರಲಿಲ್ಲ. ನಡುಬೀದಿಯಲ್ಲಿ ಇಂತಹ ಅತ್ಯಾಚಾರಮಾಡುವುದಕ್ಕೆ ಸಿದ್ಧನಾಗಿದ್ದ ವ್ಯಕ್ತಿ ಎಂತಹ ರಾಕ್ಷಸನಾಗಿರಬೇಕು? ಲೋಕದಲ್ಲಿ ಹಲವು ವದಂತಿಗಳಿವೆ. ಅನೇಕ ಅಪಹಾರಗಳ ಕತೆಯಿದೆ. ದುಷ್ಟರನ್ನೆಲ್ಲ ಹಿಡಿಯಲಿಕ್ಕಾಗದ ಪೊಲೀಸರು— "ಇದೆಲ್ಲ ಸುಳ್ಳು" ಎನ್ನುವುದಕ್ಕೆ ಸಿದ್ಧರಾಗಿದ್ದರು. ಆದರೆ ಶಂಭು ಲಿಂಗಯ್ಯನ ದೀರ್ಘಕಾಲದ ಪ್ರಪಂಚ ಜ್ಞಾನವು "ಈ ಪೊಲೀಸರ ಮಾತಿಗೆ ಕಾಸಿನ ಬೆಲೆ ಕೊಡಬಾರದು. ಸಮಯ ಬಂದಾಗ ಏನೂ ಹೇಳುತ್ತಾರೆ. ಏನೂ ಮಾಡುತ್ತಾರೆ—" ಎನ್ನುವಷ್ಟು ಬಲವಾಗಿತ್ತು. ಆದುದರಿಂದ ಈಗ ತಾನೆ ಬಂದ ಹೊಸ ಕೈದಿಯನ್ನು ದೂರದಿಂದ ನೋಡುವಾಗಲೆ ಅವನ ಎದೆ ತತ್ತರಿಸಿತು. ಕೈದಿಯ ಆಕಾರ ಹಾವ ಭಾವಗಳು ಸಂದೇಹ ಭೀತಿಗಳನ್ನು ತೊಡೆದುಹಾಕುವಂತಿರಲಿಲ್ಲ. ದುರಾತ್ಮರಿಗೆ ಮಹಾವಜ್ರಶರೀರವನ್ನು ಕೊಟ್ಟಿರುತ್ತಾನೆ ಪರಮಾತ್ಮ. ಈ ಕೈದಿಗೂ ಕೊಟ್ಟಿದ್ದಾನೆ. ಅವರು ಲಜ್ಜೆಯನ್ನು ಮುಕ್ಕಿ ತಿಂದಿರುತ್ತಾರೆ; ಇವನೂ ಹಾಗೆಯೆ! ನಡುಬೀದಿಯಲ್ಲಿ ಎರಡೂ ಕೈಗಳಿಗೆ ಬೇಡಿ ಹಾಕಿ ಪೊಲೀಸರು ಎಳೆದು ತಂದಾಗ, ಇವನ ಮುಖದಲ್ಲಿ ಒಂದಿಷ್ಟು ವಿಕಾರವಾಗಿರಲಿಲ್ಲವಂತೆ. ಮಾನಸ್ಥನಾಗಿದ್ದರೆ ಕಣ್ಣೀರು ಸುರಿಸುತ್ತಿದ್ದ. ಇವನ ಕಣ್ಣಿನಲ್ಲಿ ಒಂದು ಹನಿಯೂ ಇರಲಿಲ್ಲ; ಮಾತ್ರವಲ್ಲ ಪರಿಚಿತ ವ್ಯಕ್ತಿಗಳನ್ನು ದೂರದಲ್ಲಿ ನೋಡಿ ನಗುವಿನ ಚಿಹ್ನೆಯನ್ನು ತೋರಿಸುತ್ತಿದ್ದನಂತೆ........ಎಂತಹ ಪ್ರಾಣಿಯದು?

ಪೋಲೀಸರು ಕೈದಿಯನ್ನು ಶಂಭು ಲಿಂಗಯ್ಯನ ವಶಕ್ಕೊಪ್ಪಿಸಿದರು; ಇವನ ಹೊಣೆಗಾರಿಕೆಯ ಘೋರತೆಯನ್ನೆಣಿಸಿದೊಡನೆ ಅವನ ಎದೆ ಪಾತಾಳಕ್ಕಿಳಿಯಿತು. ಇವನನ್ನು ಕಟ್ಟಿಹಾಕುವ ಸಂಕಲೆ ಯಾವುದು? ತಡೆದು ನಿಲ್ಲಿಸುವ ಸರಳುಗೂಡು ಯಾವುದು? ಕತ್ತಲೆಕೋಣೆಯ ಕಿಟಕಿ ಯನ್ನು ಕಿತ್ತು, ಅಂಗಳಕ್ಕಿಳಿದು, ಹೊರಗಿನ ಪಾಗಾರವನ್ನು ಏರಿ, ಹಾರಿ, ಪಲಾಯನಮಾಡಿದರೆ ಏನು ಗತಿ?

ಶಂಭು ಲಿಂಗಯ್ಯ ನಾಲ್ಕಾರು ಮಂದಿ ದಡಿಗ ಕಾವಲುಗಾರರನ್ನು ಬರಹೇಳಿ, ಪೋಲೀಸರನ್ನೂ ಕರೆದುಕೊಂಡು, ಕೈದಿಯ ಮುಂದುಗಡೆ ಸ್ವಲ್ಪ ದೂರದಲ್ಲಿ ನಿಂತು, ಸೆರೆಮನೆಯ ಒಂದು ಪಕ್ಕದಲ್ಲಿದ್ದ ಸರಳಿನ ಪಂಜರಕ್ಕೆ ಒಯ್ಯಬೇಕೆಂದು ಅಪ್ಪಣೆಕೊಟ್ಟ. ಈ ನಾಲ್ಕೆಂಟು ಜನರ ತಂಡವು ಕಾರಾಗೃಹದ ಹೊರವಲಯವನ್ನು ದಾಟಿ ಒಳಹೊಕ್ಕು ಹೂ ಮೋಟವನ್ನು ಹಾದು, ಘೋರ ದುಷ್ಕೃತ್ಯಮಾಡಿದ ಪಾಪಿಗಳಿಗಾಗಿ ಪ್ರತ್ಯೇಕ ಏರ್ಪಡಿಸಿದ್ದ ಕಲ್ಲುಕಟ್ಟಿನ ಕೋಣೆಯ ಕಡೆಗೆ ಸಾಗಿತು. ಸುತ್ತಲೂ ಮುಳ್ಳಬೇಲಿಗಳು; ಕಟ್ಟಡದ ಮುಂಗಡೆಯಲ್ಲಿಯೆ ಹೆಬ್ಬೆಟ್ಟಿನ ಗಾತ್ರದ ಸರಳುಗಳಿಂದ ಮಾಡಿದ ಆವರಣ. ಹುಲಿಗಳೆ ಮೊದಲಾದ ಕ್ರೂರಪ್ರಾಣಿಗಳಿಗೆ ಇಂತಹ ವಿಹಾರಮಂದಿರಗಳು ಮೃಗಾಲಯದಲ್ಲಿ ದೊರೆಯಲಾರವು. ಈ ಗೂಡಿಗೆ ತಾಗಿ ಒಂದು ಕೋಣೆ. ಬಾಗಿಲಿನ ಸ್ಥಾನದಲ್ಲಿ ಲೋಹದ ತಗಡಿನ ಹಲಗೆ ಬಲಿದಿತ್ತು. ಕೋಣೆಯು ವಿಶಾಲವಾಗಿರಲಿಲ್ಲವಾದರೂ ಎತ್ತರಕ್ಕೆ ಕಡಿಮೆಯಿರಲಿಲ್ಲ. ಎತ್ತ ರಕ್ಕೆ ದೂರದೂರದಲ್ಲಿ ಎರಡು ಬೆಳಕು ಕಂಡಿಗಳು. ಸೂರ್ಯಕಿರಣ ಗಳು ಇಣಿಕಿ ನೋಡಬೇಕು ಇವುಗಳ ಮೂಲಕ; ಗಾಳಿ ಒಳಗೆ ನುಸುಳ ಬೇಕು ಇವುಗಳ ಮೂಲಕ; ಇದರೊಳಗೆ ಬಂಧಿತವಾಗಿರುವ ಕ್ರೂರ ಜಂತು ತಪ್ಪಿಸಿಕೊಂಡು ಹೋಗುವುದಿದ್ದರೂ ಇವುಗಳ ಮೂಲಕವೇ ಹೋಗಬೇಕು! ಶಂಭು ಲಿಂಗಯ್ಯನೂ ಅವನ ಹಿಂದೆ ಬರುತ್ತಿದ್ದ ಗುಂಪಿ ನವರೂ ಸರಳಿನ ಆವರಣದ ವರೆಗೆ ಬಂದರು. ಒಬ್ಬ ಕಾವಲುಗಾರ ಗೂಡಿನ ಬಾಗಿಲು ತೆರೆದ; ಕೋಣೆಯ ಲೋಹದ ಬಾಗಿಲನ್ನೂ ಎಳೆದ. ಕೈದಿಯನ್ನು ಗೂಡಿನೊಳಗೆ ಸೇರಿಸಿದುದಾಯಿತು. ಕೋಣೆಯ ದಾರಿ ಯನ್ನು ಕಾಣಿಸಿದುದಾಯಿತು; ಕೈಬೇಡಿಯನ್ನು ಕಳಚಿ ಸರಳಗೂಡಿನ

ಬಾಗಿಲನ್ನು ಹೊರಗಿನಿಂದ ಬಲಿದುದೂ ಆಯಿತು; ಶಂಭು ಲಿಂಗಯ್ಯನಿಗೆ ಈಗ ತಾನೆ ಸ್ವಲ್ಪ ಧೈರ್ಯ ಬಂತು!

ಶಂಭು ಲಿಂಗಯ್ಯ ಪೊಲೀಸರನ್ನು ಕಳುಹಿಕೊಟ್ಟು ಹತ್ತೆಂಟು ನಿಮಿಷ ಈ ಹೊಸ ವ್ಯಕ್ತಿಯ ಕಡೆಗೆ ಕಣ್ಣು ತಿರುಗಿಸಿ ನೋಡುತ್ತಿದ್ದ. ಕೈದಿಯ ಮುಖದಲ್ಲೇನೂ ಅಪರಾಧದ ಚಿಹ್ನೆಗಳಿರಲಿಲ್ಲ. ಹೃದಯವು ಪಾಪಮಯವಾಗಿದ್ದರೆ, ಅದರ ಪ್ರತಿಬಿಂಬ ಮುಖದಲ್ಲಿ ಕಂಡುಬರುತ್ತಿದೆ—ಎಂಬುದು ಅವನ ವಿಶ್ವಾಸ. ಆದರೆ ಈ ಮುಖದಲ್ಲಿ ಅಂತಹದೇನೂ ಇರಲಿಲ್ಲ. ಗುಂಡುಗುಂಡಾಗಿ ಬೆಳೆದು ಮಾಂಸರಕ್ತ ತುಂಬಿ ತುಳುಕುವ ಕೆನ್ನೆಗಳು; ವಿಶಾಲವಾದ ಹಣೆ; ಇವುಗಳ ನಡುವೆ ನೀಳವಾದ ಮೂಗು; ಕಿರುಮೀಸೆ; ನಿಸ್ಸಂಕೋಚಭಾವವನ್ನು ತೋರಿಸುವ ಬಿಚ್ಚುನೋಟ. ಇಲ್ಲಿಯೂ ಪಾಪವು ಅಡಗಿಕೊಂಡಿರಬಹುದೆ? ಅಥವಾ ಇಂತಹ ವೇಷ ದಲ್ಲಿಯೇ ಪಾಪವು ತಲೆಮರಸಿಕೊಳ್ಳುವುದೇ? ಶಂಭು ಲಿಂಗಯ್ಯ ಕೈದಿ ಯನ್ನು ಬಿಟ್ಟು ಹೊರಡುವಾಗ "ಇಲ್ಲಿಯೇ ಇಬ್ಬರು ಕಾವಲುಗಾರರು ಹಗಲಿರುಳು ಕಾಯುತ್ತಿರುತ್ತಾರೆ. ಅವಶ್ಯವಾದುದು ಏನಾದರೂ ಇದ್ದರೆ ತಿಳಿಸಿದರೆ, ಇವರು ಅದಕ್ಕೆ ಗಮನಕೊಡುವರು" ಎಂದು ಅವನಲ್ಲಿ ಹೇಳಿ ದರು. ಕೈದಿಯು ಒಮ್ಮೆ ಅವರ ಕಡೆಗೆ ಮುಖ ತಿರುಗಿಸಿ "ಆಗಬಹುದು" ಎಂಬರ್ಥವನ್ನು ಭಾವದಿಂದ ತೋರಿಸಿದನಲ್ಲದೆ ಮಾತಾಡಲಿಲ್ಲ. ವರ್ಷ ದಲ್ಲಿ ಹತ್ತಾರು ಮಂದಿಯಾದರೂ ಕಾವಲುಗಾರರ ಸೋವನ್ನು ತಪ್ಪಿಸಿ ಪಲಾಯನಮಾಡುತ್ತಿದ್ದುದನ್ನು ಮರೆಯಲಾರದ ಸೆರೆಮನೆಯ ಅಧಿಕಾರಿ ಹತ್ತು ಹಜ್ಜೆಗೆ ನಾಲ್ಕಾರು ಬಾರಿ ಹಿಂದೆ ತಿರುಗಿ ನೋಡಿ, ಕೈದಿ ಅಲ್ಲಿಯೇ ನಿಂತಿರುವನೆಂಬ ಧೈರ್ಯದಿಂದ ಹೊರಟುಹೋದ. ಕೈದಿಯ ಮುಖದಲ್ಲಿ ತಾತ್ಸಾರ ಸೂಚಕವಾದ ಕಿರುನಗು ಮೂಡಿತು; ಶಂಭು ಲಿಂಗಯ್ಯನಿಗೆ ಇದು ಗೋಚರಿಸದೆ ಇದ್ದಿರಲು ಕಾರಣವಿಲ್ಲ.

"ಪ್ರಪಂಚವೇ! ನಿನಗೂ ನನಗೂ ಇನ್ನೇನು ಸಂಬಂಧ?" ಎಂಬ ಪ್ರಶ್ನೆ ಹೊಸ ಕೈದಿಯ ನೋಟದಲ್ಲಿ ಇತ್ತು.

* * * *

ಸೆರೆಮನೆಯ ಅಧಿಕಾರಿ ಶಂಭು ಲಿಂಗಯ್ಯನ ಮನೆ ಅಲ್ಲಿಯೇ ಪಕ್ಕ ದಲ್ಲಿ. ಒಂದು ರಸ್ತೆ ದಾಟಿ ಇಳಿಯುವುದು ಅವನ ಅಂಗಳಕ್ಕೆ.

ಸಂಸಾರವೂ ಚಿಕ್ಕದು. ಅವನು, ಮಗಳು ಲೀಲೆ....ಈ ಇಬ್ಬರಲ್ಲದೆ, ಆ ದೊಡ್ಡ ಮನೆಯೊಳಗೆ–"ಇದು ನನ್ನ ಮನೆ" ಎಂಬ ಅಧಿಕಾರದ ಹೆಮ್ಮೆಯಿಂದ ಸುಳಿದಾಡುವ ಜನರು ಯಾರೂ ಇರಲಿಲ್ಲ.

ಅಯ್ಯನಿಗೆ ಮೂರು ಬಾರಿ ಮದುವೆಯಾಗಿತ್ತು: ಮೂರು ಬಾರಿಯೂ ವಿಧುರನಾದ. ಇಷ್ಟಾದ ಮೇಲೆ, ನಾಲ್ಕನೆಯದರ ಗೋಜಿಗೆ ಅವನು ಹೋಗಿರಲಿಲ್ಲ. ಪ್ರಥಮ ವಿವಾಹದ ಸುಂದರ ಫಲವಾಗಿ ಲೀಲೆ ಹುಟ್ಟಿದಳು. ಇಬ್ಬರು ಚಿಕ್ಕಮ್ಮಂದಿರನ್ನು ಕಳುಹಿಸಿ ಕೊಟ್ಟು ಲೀಲೆಯೇ ಮನೆಯೊಡತಿಯಾಗಿ ಕಾರಭಾರ ಮಾಡುತ್ತಿದ್ದಾಳೆ. ಅವಳೇ ಮನೆಯ ದೇವಿಯೆಂದರೂ ಸಲ್ಲುವುದು. ಅವಳ ಒಪ್ಪಿಗೆಯಿಲ್ಲದೆ ಮನೆಯೊಳಗೆ ಏನೂ ನಡೆಯದು. ತರಕಾರಿಯನ್ನು ಕೊಂಡುಕೊಳ್ಳುವುದರಷ್ಟು ಚಿಕ್ಕ ವ್ಯವಹಾರದ ಮೊದಲುಗೊಂಡು, ಉಚ್ಚಾಧಿಕಾರಿಗಳನ್ನು ಕಂಡು, ಭೆಟ್ಟಿ ಯಾಗಿ, ಉದ್ಯೋಗದಲ್ಲಿ ಅಭಿವೃದ್ಧಿಯನ್ನು ಸಾಧಿಸುವ ಹಂಚಿಕೆಯ ವರೆಗೆ ಪ್ರತಿಯೊಂದರಲ್ಲಿಯೂ ಲೀಲೆಯ ಮಾತೇ ಮಾತು; ಅವಳದೇ ನಿರೂಪ; ಶಂಭುಲಿಂಗಯ್ಯ ಕೇವಲ ನಿಮಿತ್ತ ಮಾತ್ರ. ಆಕೆಯ ಆಲೋಚನೆ ಎಂದೂ ಪೊಳ್ಳಾಗಿರಲಿಲ್ಲವಾದುದರಿಂದ, ಯಾವ ವಿಷಯದಲ್ಲಿಯೂ ದೀರ್ಘಾಲೋಚನೆಮಾಡಿ ತಲೆ ಕರಡಾಗಿಸುವ ಕಷ್ಟ ಶಂಭುಲಿಂಗಯ್ಯನಿಗೆ ತಪ್ಪಿತು. ಅವನ ತಲೆ ಕರಡಾಗದೆ ನರೆತುಹೋಗುತ್ತಿರಲು, ಲೀಲೆ ಹುಡುಗಿಯಾಗಿದ್ದವಳು ಯೌವನದ ಹೊಸ್ತಿಲಿನಲ್ಲಿ ಕಾಲಿಟ್ಟಳು.

ಅವಳ ವಿದ್ಯಾಭ್ಯಾಸವು ಅಸಂಪೂರ್ಣವಾಗಿ ನಡೆದಿದ್ದಿತು. ನೌಕರಿ ಯಲ್ಲಿ ಆಗುವ ವರ್ಗಾವರ್ಗಿ, ಶಂಭುಲಿಂಗಯ್ಯನವರ ಮನೆಯೊಳಗೆ ಗೃಹಿಣೀ ಪಟ್ಟದಲ್ಲಿ ಆಗುತ್ತಿದ್ದ ವ್ಯತ್ಯಾಸ, ಬರಿಯ ಪುಸ್ತಕ ವಿದ್ಯೆಯಲ್ಲಿ ಲೀಲೆಗಿದ್ದ ತಾತ್ಸಾರ, ಮನೆಯೊಳಗೆ ಕಂಡುಬರುತ್ತಿದ್ದ ಅವಳ ಉಪಯೋಗಿತೆ– ಇವೆಲ್ಲ ಸೇರಿ, ಅವಳ ವಿದ್ಯಾಭ್ಯಾಸಕ್ಕೆ ತಡೆಹಾಕಿದುವು. ಈ ವಿಷಯದಲ್ಲಿ ತಂದೆಗೂ ಹೆಚ್ಚು ವ್ಯಸನವಿರಲಿಲ್ಲ. ಬರಿಯ ಓದಿ ಸಿಂದೇನು ಪ್ರಯೋಜನ? ಸ್ವಾರ್ಜಿತಮಾಡಬೇಕಾದವರು ಓದಬೇಕು; ಇವಳಿಗೆ ಇದರ ಆವಶ್ಯತೆ ಇರಲಿಲ್ಲ. ತಾನು ಇದು ವರೆಗೆ ಕೂಡಿಟ್ಟ ಹಣ ಅವಳ ಜೀವನ ನಿರ್ವಹಣಕ್ಕೆ ಸಾಕಾಗುವಷ್ಟು ಇತ್ತು. ತನ್ನ ಮರಣವೂ ಮಗಳಿಗೆ ಲಾಭದಾಯಕವಾಗಿರಬೇಕೆಂದು ಅವನು ಸಂಕಲ್ಪಿಸಿದ್ದನು.

ಆತ ಕಣ್ಣುಮುಚ್ಚಿದ ಮರುದಿನ ವಿಮೆಯಿಂದ ಬರಬಹುದಾದ ಇಪ್ಪತ್ತೈದು ಸಾವಿರವನ್ನೂ ಸ್ವಾರ್ಜಿತಕ್ಕೆ ಸೇರಿಸಿದರೆ, ಗಂಡ ಹೆಂಡತಿಯರಿಬ್ಬರೇ ಇರುವ ಒಂದು ಚಿಕ್ಕ ಸಂಸಾರವು ಮರ್ಯಾದೆಯಿಂದ ಕಾಲಕ್ಷೇಪಮಾಡುವುದಕ್ಕೆ ಏನೂ ಆತಂಕವಿಲ್ಲದಂತಾಗುವುದು. ಇದೆಲ್ಲದಕ್ಕೆ ಒಬ್ಬಳೇ ಒಬ್ಬಳು—ಲೀಲೆ ಉತ್ತರಾಧಿಕಾರಿಣಿ ಎಂದ ಮೇಲೆ, ಅವಳ ಓದು ಬರಹವೆಂದೇಕೆ ತಲೆಕೆಡಿಸಿಕೊಳ್ಳಬೇಕು? ಆ ಕಾಲ ಬಂದಾಗ, ಯೋಗ್ಯನಾದ ಅಳಿಯನೊಬ್ಬನ ಕೈಗೆ ಒಪ್ಪಿಸಿಬಿಟ್ಟರಾಯಿತು. ಅದು ವರೆಗೆ ಬೆಳೆಯಲಿ. ಸ್ವಚ್ಛಂದವಾಗಿ ಬೀಸುವ ಗಾಳಿ, ಹೊಡೆಯುವ ಸೂರ್ಯಪ್ರಕಾಶಗಳಲ್ಲಿ ನಳನಳಿಸಿ ಬೆಳೆಯುವ ಕಾಡಿನ ಬಳ್ಳಿಯಂತೆ ಬೆಳೆಯಲಿ; ಮೊಗ್ಗೆಯಂತೆ ನಗಲಿ; ಕೋಗಿಲೆಯಂತೆ ಹಾಡಲಿ; ತನ್ನೊಡನೆ ಇರುವಷ್ಟು ಕಾಲ ಮನೆಯ ಜ್ಯೋತಿಯಾಗಿರಲಿ—ಎಂಬದೊಂದೇ ತಂದೆಯ ಬಯಕೆ.

ಲೀಲೆ ಇಂತಹ ಭಾವನೆಯೊಡನೆ ಬೆಳೆದಳು. ಸಂಗೀತ ಚಿತ್ರಕಲೆಗಳಲ್ಲಿ ಅವಳ ಆಸಕ್ತಿ. ಒಮ್ಮೊಮ್ಮೆ ತಂದೆಯಿಲ್ಲದೆ ಮನೆ ಶೂನ್ಯವಾದ ಗಳಿಗೆಗಳಲ್ಲಿ ಸಂಗೀತದ ಲಹರಿಯೊಂದು ಎದೆಯಿಂದುಕ್ಕಿ ಹಾಡಾಗಿ ಹರಿದು ಸುತ್ತಲೂ ಆನಂದ ರಸವಾಗಿ ಚಿಮ್ಮುತ್ತಿತ್ತು; ಕಣ್ಣಿನಲ್ಲಿಯೂ ಭಾವನೆಯಲ್ಲಿಯೂ ಅಂಟಿಕೊಂಡಿದ್ದ ಪ್ರಕೃತಿಯ ಸೌಂದರ್ಯವು ಕುಂಚದಿಂದ ಹೊರಟು ಚಿತ್ರಫಲಕಗಳ ಮೇಲೆ ಎದ್ದು ಕಾಣಿಸುತ್ತಿತ್ತು. ತಂದೆ, ಮನೆ, ಚಿತ್ರ, ಸಂಗೀತ.... ಇವುಗಳೊಡನೆ ತೋಟಗಾರಿಕೆಯಲ್ಲಿ ಆಕೆಗೆ ಆಸಕ್ತಿ. ಆಸಕ್ತಿ ಎಂದರೆ ವ್ಯಸನವೆನ್ನುವಷ್ಟು ಗಾಢ. ಕಣ್ಣು ಸೆಳೆಯುವ ಲೀಲೆಯ ಸೌಂದರ್ಯವು ಹಲ ಕನ್ಯಾರ್ಥಿಗಳನ್ನು ಬರಿಸದೆ ಇರಲಿಲ್ಲ. ಹುಡುಗಿಯನ್ನು ಆ ಕಾಲದಲ್ಲಿ ಕೇಳುವುದು ಸರಿ; ತಂದೆ ಕೊಡುವುದೂ ಸರಿಯೆ; ಆದರೆ, ತನ್ನ ಸಾಂಸಾರಿಕ ಸ್ಥಿತಿಗತಿಗಳಲ್ಲಿ ತನಗಿದ್ದ ಒಂದೇ ಒಂದು ಊರುಗೋಲನ್ನು ಕಿತ್ತುಕೊಳ್ಳಲೇ? ಎಂದು ಕೇಳುತ್ತಿದ್ದವರು ಅಧಿಕಪ್ರಸಂಗಿಗಳಲ್ಲವೆ? ಎಂದೂ ಒಮ್ಮೊಮ್ಮೆ ಆತನಿಗೆ ತೋರುವುದು; ಆದುದರಿಂದ ಮದುವೆಯ ಮಾತುಗಳು ಬಂದಾಗಲೆಲ್ಲ-ಇನ್ನೂ ವಿಚಾರಿಸಲಿಲ್ಲ; ನೋಡೋಣ ಮುಂದೆ;—ಎಂದ ಉತ್ತರಗಳನ್ನು ಕೊಟ್ಟು ತನಗೂ ಮಗಳಿಗೂ ಉಂಟಾಗಬಹುದಾದ ಅಗಲಿಕೆಯ ಸಂಭವವನ್ನು ನಿವಾರಿಸಿಬಿಡುತ್ತಿದ್ದ ಶಂಭುಲಿಂಗಯ್ಯ; ಲೀಲೆಯಂತೂ ಮದುವೆಗೆ ಪ್ರತಿಕೂಲವಾಗಿದ್ದಳು.

ಲೀಲೆ ಸೆರೆಮನೆಯ ಹೂದೋಟಕ್ಕೆ ಹೋಗಿಬಾರದ ದಿನವಿರಲಿಲ್ಲ. ಅಲ್ಲಿ ಗೈಯುತ್ತಿದ್ದ ಕೈದಿಗಳೆಲ್ಲ ಅವಳ ಸೇವಕರು. ಮಡಿಗಳನ್ನು ತಯಾರಿಸುವುದು; ಹೂಗಿಡ ಬಳ್ಳಿಗಳನ್ನೆಲ್ಲ ನೆಡಿಸುವುದು; ಇಡೀ ಉದ್ಯಾನದಲ್ಲಿ ಅತಿ ಸುಂದರವಾಗಿರುವ ಹೂವೊಂದನ್ನು ಪತ್ರ ಸಮೇತ ಕಿತ್ತು ಹೆರಳಿನಲ್ಲಿ ಇಟ್ಟುಕೊಳ್ಳುವುದೂ—ಅವಳ ಅಭ್ಯಾಸ. ತಮ್ಮ 'ಅಮ್ಮ' ನಿಗೆ ಹಿತಕರವಾಗುವಂತೆ ಕೆಲಸಮಾಡಿ, ಒಂದು ಒಳ್ಳೆಯ ಮಾತನ್ನು ಕೇಳುವುದೆಂದರೆ ಸೆರೆಮನೆಯೊಳಗಿನ ಗೆಯ್ಯಾಳಿಗಳಿಗೂ ಪ್ರೀತಿ.

ಆದರೆ ಹೊಸ ಕೈದಿ ಬಂದಂದಿನಿಂದ ಈ ಸಂಪ್ರದಾಯಕ್ಕೆ ಭಂಗ ಬಂದಿತ್ತು. ಆತನ ಕೋಣೆ ಹೂತೋಟದ ಬಳಿಯಲ್ಲಿಯೆ. ಅವನ ವಠಾರಕ್ಕೆ ನೂರು ಗಜದ ದೂರದಲ್ಲಿಯೂ ಸಂಚರಿಸುವುದು ಅಪಾಯಕರ ಎಂಬ ಭಾವನೆಯನ್ನು ಊರಲ್ಲಿ ಹರಡಿದ್ದ ಸುದ್ದಿ ಸೊಲ್ಲುಗಳು ದೃಢಪಡಿಸಿದ್ದುವು. ಅವಳು ಹೂದೋಟವನ್ನು ನೋಡದೆ ತಿಂಗಳು ಮೂರಾಗಿತ್ತು. ಇಷ್ಟು ದೀರ್ಘಕಾಲದಲ್ಲಿ ಅವಳೇ ನೆಡಿಸಿದ್ದ ಬಳ್ಳಿಗಳು ಹೇಗೆ ಒಣಗಿ ಕ್ಷೀಣವಾಗಿದ್ದುವೊ? ಯಾರು ಬಲ್ಲರು?

ಒಂದು ದಿನ ಲೀಲೆ ತಂದೆಯೊಡನೆ ಹೂತೋಟದ ಪ್ರಶ್ನೆಯನ್ನೆತ್ತಿದಳು. ತಾನು ನೆಟ್ಟ ಬಳ್ಳಿಗಳಿಗೆ ನೀರೆರೆಯುತ್ತಾರೆಯೆ? ಸಸಿಗಳು ಚಿಗುರಿವೆಯೆ? ದುಂಡುಮಲ್ಲಿಗೆಯ ಬಳ್ಳಿಯಲ್ಲಿ ಚಿಗುರೇರಿದೆಯೆ? ಹೂ ಮೂಡಿದೆಯೆ? ತಾನು ನೋಡದೆ ಯುಗವಾಗಿತ್ತು.

"ಹೋಗು! ನೋಡು! ನಿನ್ನ ತೋಟ ಯಾವ ವೈಭವದಿಂದ ವಿರಾಜಿಸುತ್ತಿದೆ ನೋಡು!" ಎಂದ ಶಂಭುಲಿಂಗಯ್ಯ.

ಲೀಲೆ: ಆ ಕೈದಿ ಅಲ್ಲಿಯೆ ಇರುವನಲ್ಲವೆ?

ಶಂಭುಲಿಂಗಯ್ಯ: ಹೌದು—ಅಲ್ಲಿಯೆ....

ಲೀಲೆ: ಇನ್ನೆಷ್ಟು ಕಾಲ ಅಲ್ಲಿರಬಹುದು?

ಶಂಭುಲಿಂಗಯ್ಯ: ಸರಕಾರದವರ ದಿವ್ಯ ಚಿತ್ತಕ್ಕೆ ಕಂಡಷ್ಟು ಕಾಲ....

ಲೀಲೆ: ಎಂದಿನಂತೆ ನಾನು ಹೂತೋಟದಲ್ಲಿ ಸಂಚರಿಸಬಹುದೆ?

ಶಂಭುಲಿಂಗಯ್ಯ: ಕೂಡದೆಂದು ಯಾರೆಂದರು?

ಲೀಲೆ: ಆ ಕೈದಿ ನರರಾಕ್ಷಸನೆಂದಲ್ಲವೆ ಲೋಕವಾರ್ತೆ?

ಶಂಭುಲಿಂಗಯ್ಯ: ಹೌದು; ಲೋಕವಾರ್ತೆ ಹಾಗಿದೆ.

ಲೀಲೆ: ಅವನು ಮಾಡಿದ ದುಷ್ಕೃತಿಯೂ ಅತಿ ಘೋರ.

ಶಂಭುಲಿಂಗಯ್ಯ: ಹೌದು; ಘೋರ! ಅತಿ ಘೋರ!

ಲೀಲೆ: ಹಾಗಿದ್ದರೆ ಆ ವಠಾರದಲ್ಲಿ ಸುಳಿಯುವುದು ಹೇಗೆ?

ಶಂಭುಲಿಂಗಯ್ಯ: ಮಗೂ....ಯಾರೇನು ಮಾಡಿದರೋ ಏನಾಯಿತೋ? ಆ ವಿಷಯವು ನಿನಗೆ ಬೇಕಾಗಿಲ್ಲ. ಎಂದಿನಂತೆ ನೀನು ಅಲ್ಲಿ ತಿರುಗಾಡುವುದಕ್ಕೆ ನನ್ನ ಆತಂಕವೇನೂ ಇಲ್ಲ; ಎಂದಿಷ್ಟನ್ನು ಹೇಳಬಲ್ಲೆ.

ಲೀಲೆ: ಆತನಿರುವ ಕೋಣೆಗೆ ಯಾವಾಗಲೂ ಬೀಗವೆ?

ಶಂಭುಲಿಂಗಯ್ಯ: ಅವನನ್ನು ಕಟ್ಟಿಡುವ ಶಕ್ತಿ ಬೀಗಕ್ಕಿಲ್ಲ; ಆದುದರಿಂದ ಬಾಗಿಲು ಸದಾ ತೆರೆದೇ ಇದೆ. ಆತ ಬೇಕಾದಲ್ಲಿ ಸಂಚರಿಸುತ್ತಾನೆ. ನಿರುದ್ಯೋಗದ ಬೇಸರನ್ನು ತೋಟಗಾರಿಕೆಯಲ್ಲಿ ಕಳೆಯುತ್ತಾನೆ. ಕತ್ತಲೆಕೋಣೆಯ ಏಕಾಂತದಲ್ಲಿ ಕುಳಿತು ಕಣ್ಣೀರು ಸುರಿಸುತಿದ್ದ; ನಿಟ್ಟುಸಿರು ಕರೆಯುತ್ತಿದ್ದ; ಕಂಡು ಕಂಡು ಬೇಸರಾಗುತ್ತಿತ್ತು. ಇದು ವರೆಗೆ ಒಬ್ಬರೊಡನೆಯೂ ಕೇಡುಮಾತನ್ನು ಆಡಿದವನಲ್ಲ; ಅಸಭ್ಯ ರೀತಿಯಲ್ಲಿ ವ್ಯವಹರಿಸಿದವನಲ್ಲ. ತನ್ನ ಮಿತವಾದ ಪರಿಧಿಯೊಳಗೆ ದೊರೆಯಬಹುದಾದ ಸ್ವಾತಂತ್ರ್ಯವನ್ನು ಅನುಭವಿಸಲಿ ಎಂದು ಅವನನ್ನು ಸ್ವೇಚ್ಛೆಯಿಂದ ತಿರುಗಾಡಬಿಟ್ಟಿದ್ದೇನೆ ಮಗು....ನಿನ್ನ ಹೂತೋಟವನ್ನು ನೀನೆ ನೋಡಿ ಈ ವ್ಯವಸ್ಥೆಯಿಂದ ಚೆನ್ನಾಯಿತೆ? ಕೆಡುಕಾಯಿತೆ? ನೀನೆ ನಿಶ್ಚಯಿಸಬಹುದು....

ಈ ಮಾತುಗಳನ್ನು ಕೇಳಿ ಆದ ಸಂತೋಷವನ್ನು ಹಿಡಿಸುವುದಕ್ಕಾಗಲಿಲ್ಲ ಲೀಲೆಗೆ. ತಾನು ಮೂರು ತಿಂಗಳಿನಿಂದಿತ್ತ ಬಹಿಷ್ಕರಿಸಿದ್ದ ಉದ್ಯಾನದ ಕಡೆಗೆ ತಟ್ಟನೆ ಹಾರಿದಳು. ಅಲ್ಲಿ ಕೆಲಸಮಾಡುತ್ತಿದ್ದ ಕೈದಿಗಳು ತಮ್ಮ ಅಮ್ಮನ ಆಗಮನದಿಂದ ಸಂತೋಷವನ್ನು ವ್ಯಕ್ತಪಡಿಸಿ ಸುತ್ತಲೂ ನೆರೆದರು. ಲೀಲೆ ತನ್ನ ಹೂಗಿಡಗಳ ಕಡೆಗೆ ದೃಷ್ಟಿಯನ್ನು ಪ್ರಸರಿಸಿದಳು. ಒಂದು ನಿಮಿಷ ಎಲ್ಲವನ್ನೂ ನೋಡಿ "ಇದೇನು ಸಂಪೂರ್ಣ ವ್ಯತ್ಯಾಸಹೊಂದಿದೆಯಲ್ಲ?" ಎಂದು ಪ್ರಶ್ನಿಸಿದಳು. "ಹೌದು!" ಎಂದ ಒಬ್ಬ ಕೈದಿ.

ಲೀಲೆ: ಇದಕ್ಕೆ ಕಾರಣ ಯಾರು?

ಕೈದಿ: 'ಅವರು!' ಎಂದು ಆ ಹೊಸ ಕೈದಿಯ ಕಡೆಗೆ ಬೆರಳು ತೋರಿಸಿದ.

ಲೀಲೆ ಅತ್ತ ದೃಷ್ಟಿಯನ್ನೆಸೆದಳು. ಇಪ್ಪತ್ತೈದು ವರ್ಷ ಮೀರದ ಆ ತರುಣ ಹರಕು ಚಾಪೆಯ ಮೇಲೆ ಕುಳಿತು ಯಾವುದೋ ಒಂದು ಪುಸ್ತಕವನ್ನೋದುವುದರಲ್ಲಿ ಬದ್ಧಲಕ್ಷನಾಗಿದ್ದ. ಅವನ ದೃಷ್ಟಿ ಚಲಿಸುತ್ತಿರಲಿಲ್ಲ. ಆತನ ಸ್ವರೂಪವೆಂತಹದೆಂದು ನೋಡುವ ಅವಕಾಶ ಲೀಲೆಗೆ ಸಿಕ್ಕಿತು. ಎಂತಹ ರೂಪ! ಸೌಂದರ್ಯವನ್ನೀ ರೀತಿಯಲ್ಲಿ ಸುಲಿದು ಸೂರೆಮಾಡಿ, ತಮ್ಮ ಅಂಗಾಂಗಗಳಲ್ಲಿ ಪ್ರದರ್ಶನಕ್ಕಿಟ್ಟಂತೆ ಚಿಮ್ಮಿಸುತ್ತಿರುವ ಸ್ಫುರದ್ರೂಪಿಗಳು ಈ ಲೋಕದಲ್ಲಿ ವಿರಳ! ಎಂಬ ಭಾವನೆ ಆಕೆಯಲ್ಲಿ ಉಂಟಾಯಿತು.

"ಈ ಹೂಗಿಡಗಳನ್ನೆಲ್ಲ ಕಿತ್ತು ಮುಂಚಿನಂತೆಯೇ ನೆಟ್ಟುಬಿಡಲೆ?" ಎಂದು ಕೈದಿ ಕೇಳಿದ.

ಒಂದು ನಿಮಿಷ ವಿಲಂಬಿಸಿ "ಬೇಡ; ಹಾಗೆಯೇ ಇರಲಿ. ಮನುಷ್ಯರ ಸ್ಪರ್ಧಾಬುದ್ಧಿಗೂ ಈ ಹೂಗಿಡಗಳಿಗೂ ಏನು ಸಂಬಂಧ?" ಎಂದು ಆಕೆ ಕೇಳಿದಳು. ಕೈದಿಗೆ ಅರ್ಥವಾಗಲಿಲ್ಲ. ಬೇರಾವುದಕ್ಕಲ್ಲದಿದ್ದರೂ ತನ್ನ "ಅಮ್ಮ"ನ ಮನಸ್ಸಂತೋಷಕ್ಕಾಗಿ ಆ ಗಿಡಗಳನ್ನೆಲ್ಲ ಕಿತ್ತು ತಲೆ ಕೆಳಗಾಗಿ ಊರುವುದಕ್ಕೂ ಆ ಕೈದಿ ತಯಾರಾಗಿದ್ದ. ತನ್ನಂತೆ ಕೈಯಲ್ಲಿ ಬೇಡಿ ತೊಟ್ಟು ಸೆರೆಮನೆಗೆ ಬಂದಾತ, ದೊಡ್ಡ ನವಾಬನಂತೆ ಹೂತೋಟದ ಮೇಲೆ ಕೈಯಾಡಿಸುವುದು, ಆತನಿಗೆ ಅಸಹನೀಯವಾಗಿತ್ತು; ತನ್ನ ಅಮ್ಮನಿಗೆ ಇದರಿಂದ ಅಪಮಾನವಾಯಿತೆಂದೂ ಆತ ಭಾವಿಸಿದ್ದ. ಆದರೆ ಶಂಭುಲಿಂಗಯ್ಯನ ಆಜ್ಞೆಯಾಗಿದೆ....ಹೂತೋಟದಲ್ಲಿ ಆ ಹೊಸ ಕೈದಿ ಏನು ಬೇಕಾದರೂ ಮಾಡಲಿ! ಎಂದು. ಈಗ ಅಮ್ಮನೂ ಇದಕ್ಕೆ ಸೈಗುಟ್ಟಿದಂತಿದೆ; ಅವನೇನು ಮಾಡಬಹುದು?

ಮೂರು ತಿಂಗಳ ಅನಂತರ ದಿವ್ಯವಾಗಿ ಅರಳಿದ್ದ ಗುಲಾಬಿ ಹೂವೊಂದು ಲೀಲೆಯ ಮುಡಿಯನ್ನು ಅಲಂಕರಿಸಿತು; ಕೈದಿ ಅದನ್ನು ಕಂಡು ಹಿಗ್ಗಿದ. ಆತನಿಗೆ ವ್ಯಸನವೊಂದೆ....ಇಡಿ ತೋಟವನ್ನು ಅಡಿಮೇಲು ಮಾಡಿದ ಆ ಹೊಸ ಕೈದಿಯ ಕೃತಿಗಳನ್ನೆಲ್ಲ ಹಾಳುಮಾಡಿ ಲೀಲಮ್ಮನವರ ತೋಟಗಾರಿಕೆಯ ಹೆಗ್ಗಳಿಕೆಯನ್ನು ಪುನಃ ಪ್ರಸ್ತಾಪಿಸಬೇಕೆಂಬ ಆಸೆಯಿತ್ತು; ಅದು ಫಲಿಸಲಿಲ್ಲ—ಅಷ್ಟೆ!

ಆ ದಿನ ಮಾತ್ರವಲ್ಲ; ಮರುದಿನವೂ ಲೀಲೆ ತೋಟವನ್ನು ಸಂದರ್ಶಿಸಿದಳು; ಹೊಸ ಕೈದಿ ತನ್ನ ಪಂಜರದೊಳಗೇ ನಿಂತು ಇದನ್ನೆಲ್ಲ ನೋಡುತ್ತಿದ್ದ; ಅವನು ನೋಡುತ್ತಿದ್ದುದನ್ನು ಲೀಲೆಯೂ ನೋಡುತ್ತಿದ್ದಳು.

ಒಂದು ದಿನ ಕೈದಿ ಸ್ವತಃ ಹಾರೆ ಹಿಡಿದು ಕೆಲಸಮಾಡುತ್ತಿದ್ದ; ಲೀಲೆ ಬಂದಳು; ಬೆಚ್ಚಿಬಿದ್ದವನಂತೆ ಆತ ಹಾರೆಯನ್ನು ಅಲ್ಲಿಯೆ ಬಿಟ್ಟು ಹೊರಡುವುದಕ್ಕೆ ಸಿದ್ಧನಾದ. ಲೀಲೆ "ಹೋಗಬೇಡಿ; ನಿಮ್ಮ ಕೆಲಸ ಮುಗಿಯಲಿ!" ಎಂದಳು.

"ಈ ನಿರುದ್ಯೋಗವು ಎಂದು ಮುಗಿಯುವುದೋ ಅಂದೇ ಈ ಕೆಲಸ ಕೊನೆಹೊಂದುವುದು" ಎಂದ ಆ ಹೊಸ ಕೈದಿ; ಈ ಬಗೆಯ ಉತ್ತರ ಹೊರಟ ಮುಖವನ್ನು ಲೀಲೆ ಕಣ್ಣಿಟ್ಟು ನೋಡಿದಳು. ಅಲ್ಲಿಯೇ, ಆ ತೋಟದಲ್ಲಿಯೇ ಅರಳಿ ನಗುತ್ತಿದ್ದ ಹೂಗಳಲ್ಲಿದ್ದಷ್ಟೆ ಮುಗ್ಧಭಾವ ಆತನ ನಗುವಿನಲ್ಲಿಯೂ ಕಂಡು ಬಂದಿತು ಲೀಲೆಯ ದೃಷ್ಟಿಗೆ!

ಮತ್ತೊಂದು ದಿನ ಬಂದ ಲೀಲೆ, ಎಂದಿನಂತೆ ಹೂಗೊಂಚಲನ್ನು ಕೊಯಿದು ಮುಡಿಯಲ್ಲಿಡದೆ ಹೊರಡುವುದಕ್ಕೆ ಸಿದ್ಧಳಾದಳು. ಹೊಸ ಕೈದಿ "ಅದೇಕೆ ಹೂ ಮುಡಿಯುವುದಿಲ್ಲ?" ಎಂದು ಪ್ರಶ್ನಿಸಿದ.

ಲೀಲೆ: ಈ ಗುಲಾಬಿ ನಿಮ್ಮ ಹಸ್ತಸ್ಪರ್ಶದಿಂದ ಅರಳಿ ನಿಂತಿದೆ; ಅದನ್ನು ಹೊತ್ತ ತಾಯಿಗಿಡಕ್ಕೆ ನೋವುಮಾಡಬೇಕೆ?

ಕೈದಿ: ಈ ಹೂವನ್ನು ಮುಡಿದರೆ ಅಪವಿತ್ರತೆಯುಂಟಾಗುವುದಲ್ಲವೆ?

ಲೀಲೆ ಈ ಪ್ರಶ್ನೆಯನ್ನು ಕೇಳುವುದಕ್ಕೆ ಸಿದ್ಧಳಾಗಿರಲಿಲ್ಲ. ಆತನ ಮುಚ್ಚಿಟ್ಟ ಎದೆಯ ಕುದಿ ಹೀಗೆ ಹೊರಸೂಸೀತೆಂದು ಅವಳು ಎಣಿಸಿರಲಿಲ್ಲ. ಪಕ್ಕನೆ ಅವಳ ಮುಖದ ಬಣ್ಣ ಬದಲಾಯಿತು; ಮಾತು ಬರಲಿಲ್ಲ. ಒಂದು ನಿಮಿಷ ಮೌನದಲ್ಲಿದ್ದು "ನಿಮ್ಮ ಕೈಮುಟ್ಟಿ ಹೊಸ ಬೆಡಗಿನಿಂದ ಮಿರುಗುತ್ತಿರುವ ಈ ಉದ್ಯಾನದ ಜೀವದಂತಿರುವ ಈ ಹೂವನ್ನು ಕಿತ್ತು ತೆಗೆಯಬೇಕೆ? ಎಂದಿಷ್ಟೆ ನನ್ನ ಯೋಚನೆ" ಎಂದಳು. ಕೈದಿಯ ಕೆನ್ನೆ ಕೆಂಪೇರಿತು. ಲೀಲೆಯ ಮುಖವೇನಾಯಿತೋ ಕಂಡವರಿಲ್ಲ.

ಹೊಸ ಕೈದಿ ತನ್ನ ಗೂಡಿನ ಕಡೆಗೆ ಹೆಜ್ಜೆಯಿಟ್ಟ; ಲೀಲೆ ತನ್ನ ಮನೆಯ ಕಡೆಗೆ ಮುಖ ತಿರುಹಿಸಿದಳು.

ಈ ಜೀವಗಳು ನಮ್ಮ ಮರೆಯಲ್ಲಿ ನಿಂತು ಕಣ್ಣುಮುಚ್ಚಾಟ ವಾಡುತ್ತಿವೆ—ಎಂದು ಉದ್ಯಾನದ ಗಿಡಬಳ್ಳಿಗಳು ನಕ್ಕುವೋ ಏನೋ!

* * * *

ದಿನಕರನಿಗೆ ನಾಲ್ಕು ವರ್ಷದ ಕಠಿಣ ಶಿಕ್ಷೆ! ಇಂತಹ ಅಪರಾಧಕ್ಕೆ ಈ ಶಿಕ್ಷೆ ಸಾಲದೆಂದು ಊರಿನ ಜನ ಬೊಬ್ಬಿಡುತ್ತಿದ್ದರು. ನ್ಯಾಯಾಧೀಶರು ಅಪರಾಧಿಯ ವಯಸ್ಸನ್ನು ಕಂಡು ಸದಯರಾಗಿದ್ದಿರಬೇಕು. ಇಲ್ಲವಾದರೆ, ಇಷ್ಟರಲ್ಲಿಯೇ ಮುಗಿಯುತ್ತಿತೆ? ಕುಲೀನೆಯೊಬ್ಬಳ ನೀತಿ ಕೆಡಿಸುವ ಪ್ರಯತ್ನವೊಂದು; ಮೊದಲೇ ಕ್ಷೀಣಕಾಯನಾಗಿದ್ದ ಸುಬ್ಬಯ್ಯನವರ ಔರಸ ಪುತ್ರನನ್ನು ನೆಲಕ್ಕೆ ಅಪ್ಪಳಿಸಿ, ಮೂಗು ಮುರಿಯುವಷ್ಟು ಗಾಯಮಾಡಿದ ಅಪರಾಧ ಮತ್ತೊಂದು; ನ್ಯಾಯಸ್ಥಾನದ ಮುಂದೆ ನಿಂತು "ನಿಮ್ಮ ಈ ಕಾನೂನು ಕಾಯಿದೆಗಳನ್ನು ನಾನು ಒಪ್ಪಿಕೊಳ್ಳಲಾರೆ" ಎಂದು ಧೃಷ್ಟತೆಯಿಂದಾಡಿ ಕೋರ್ಟಿಗೆ ಮಾನಹಾನಿ ಮಾಡಿದ ತಪ್ಪು ಮೂರನೆಯದು; ಈ ಮೂರಕ್ಕೆ ಪ್ರಾಯಶ್ಚಿತ್ತವಾಗಿ ಏನೂ ಮಾಡಬಹುದಾಗಿತ್ತು ನ್ಯಾಯಾಧೀಶರು; ಆದರೆ ನಾಲ್ಕೆ ವರ್ಷದ ಕಠಿಣ ಶಿಕ್ಷೆಯನ್ನು ವಿಧಿಸಿದ್ದಾರೆ; ಅನ್ಯಾಯವಲ್ಲವೆ?

ವಿಚಾರಣೆ ನಡೆಯುತ್ತಿದ್ದಾಗ ತರುಣನ ಚರ್ಯೆ ಅತ್ಯಂತ ಉದ್ಧಟ ಸ್ವಭಾವದ್ದಾಗಿತ್ತು; ಸುಬ್ಬಯ್ಯನ ಮಗ ಸಾಕ್ಷ್ಯವೇದಿಕೆಯನ್ನೇರಿದಾಗ, ಅದೊಂದು ಕ್ರಿಮಿಕೀಟ ಎನ್ನುವಂತಹ ತಾತ್ಸಾರದೃಷ್ಟಿಯನ್ನು ಆ ಕಡೆಗೆ ಬೀರಿದ. ಕಲ್ಯಾಣಿ ಭಯಸಂಭ್ರಮದಿಂದ ಮುಖ ತೋರಿಸಿದಾಗ, ಆಕೆಯ ಮನಸ್ಸನ್ನು ನೋಯಿಸುವ ಚುಚ್ಚು ನಗುವನ್ನು ನಕ್ಕ. ನ್ಯಾಯಾಧೀಶರ ಶಿಕ್ಷೆಯನ್ನು ಕೇಳಿ—ತಾನು ದಿಗ್ವಿಜಯಿಯಾಗಿ ಬಂದಂತಹ ಹೆಮ್ಮೆಯಿಂದ ತಲೆಯನ್ನು ನೆಟ್ಟಗೆ ಮಾಡಿ, ಅಪರಾಧಿ ಪಂಜರದಿಂದ ಹೊರಟು ಹೋದ........ಇನ್ನೇನು? ಸೆರೆಮನೆಯಲ್ಲಿ ನಾಲ್ಕು ವರ್ಷಗಳನ್ನು ಸುಖವಾಗಿ ಕಳೆದು ಬರುತ್ತಾನೆ. ಅಲ್ಲಿರುವ ಕೆಡುಕರ ಸಂಪರ್ಕದಿಂದ ಹೆಚ್ಚಿನ ಅನುಭವ ಪಾಂಡಿತ್ಯಗಳನ್ನು ಪಡೆದು ದೊಡ್ಡ ದರೋಡೆಗಾರನಾಗುತ್ತಾನೆ. ಕಾನೂನು ಪಾಪಬುದ್ಧಿಯನ್ನು ಸಮೂಲವಾಗಿ ಕೀಳುವುದರ ಬದಲಾಗಿ ಈ ಸಂದರ್ಭದಲ್ಲಿ ಅದಕ್ಕೆ ಗೊಬ್ಬರ ಹಾಕಿದಂತೆ ತೋರುವುದಲ್ಲ?

ಆ ದಿನ ಸಂಜೆಗೆ ಹೊಸ ಕೈದಿಯನ್ನು ಸೆರೆಮನೆಗೆ ತಂದಾಗ, ಶಂಭು ಲಿಂಗಯ್ಯನ ಮನಸ್ಸಿನಲ್ಲಿ ವಿಕಾರವಾಯಿತು. ಕತ್ತಲೆಕೋಣೆಗೆ ಕಳು ಹಿಸಿಕೊಡುವಾಗ ನಡೆ ತತ್ತರಿಸಿತು; ಆಡುವಾಗ ಮಾತು ತಡೆದು ಬಂತು. "ನನ್ನ ವಿಷಯದಲ್ಲಿ ನೀವೇನು ಭಾವಿಸುತ್ತೀರಿ?" ಎಂದು ಆತ ನೇರಾಗಿ ಪ್ರಶ್ನೆ ಹಾಕಿದ.

"ಏನು ಭಾವಿಸಬಹುದು ದಿನಕರರಾಯರೆ? ನಾವು ಕಾನೂನಿನ ಲೋಕದಲ್ಲಿದ್ದೇವೆ ಎಂಬುದನ್ನು ಮರೆಯಲಾಗುತ್ತದೆಯೆ?" ಎಂದು ಶಂಭುಲಿಂಗಯ್ಯ ಕೇಳಿದ.

ಕೈದಿ: ಹೌದು; ಕಾನೂನಿನ ಪ್ರಪಂಚವಿದು. ಈ ಪ್ರಪಂಚಕ್ಕೆ ಇಂತಹ ಕಾನೂನುಗಳೇ ಬೇಕು.

ಶಂಭುಲಿಂಗಯ್ಯ: ಆ ಮಾತು ಹೇಗೂ ಇರಲಿ; ಇಷ್ಟು ತಿಂಗಳು ನೀವಿಲ್ಲಿ ಇದ್ದಾಗ ಅತಿ ಸಭ್ಯರಾಗಿ ವರ್ತಿಸಿದಿರಿ; ನನ್ನಲ್ಲಿಯೂ ಒಂದು ಬಗೆಯ ಮಮತೆಯನ್ನು ಹುಟ್ಟಿಸಿದಿರಿ. ಅಗಲುವಾಗ ಇದನ್ನೆಲ್ಲ ಸ್ಮರಿಸ ದಿರಲಾಗುತ್ತದೆಯೆ?

ಕೈದಿ: ಸ್ಮರಿಸುವ ಒಂದು ವ್ಯಕ್ತಿಯಾದರೂ ಇರುವುದು ನನ್ನ ಸುದೈವ' ಎನ್ನುತ ದಿನಕರ ನಕ್ಕ; ಶಂಭುಲಿಂಗಯ್ಯ ಬಹಳ ವ್ಯಸನದಿಂದ ಅವನನ್ನು ಕತ್ತಲೆಕೋಣೆಗೆ ಸಮರ್ಪಿಸಿ ಹೊರಟ.

ಮರುದಿನ ಬೆಳಿಗ್ಗೆ ಎಂದಿನಂತೆ ಲೀಲಿ ಹೂದೋಟಕ್ಕೆ ಬಂದಳು. ದಿನಕರ ಎಂದಿನಂತೆ ಹೂಗಿಡಗಳನ್ನು ನೋಡುತ್ತಿದ್ದ; ಲೀಲೆ ಬರು ವುದನ್ನು ಗಮನಿಸಿ, ಕೈಯಲ್ಲಿದ್ದ ತೊಟ್ಟಿಪಾತ್ರೆಗಳನ್ನು ಕೆಳಗಿರಿಸಿದ. ಲೀಲೆ ಸಮೀಪಕ್ಕೆ ಬಂದಳು. ಆಕೆಯ ಕಣ್ಣೆವೆಯಲ್ಲಿ ಹನಿಗಳು ನಿಂತಿದ್ದು ಸೂರ್ಯಕಿರಣ ಸ್ಪರ್ಶದಿಂದ ಸ್ಫಟಿಕದಂತೆ ತಳತಳಿಸುತ್ತಿದ್ದುವು. ಮುಖ ದಲ್ಲಿ ಉದ್ವೇಗವಿತ್ತು; ಉಸಿರಲ್ಲಿ ಗಡಿಬಿಡಿಯಿತ್ತು; ಮಾತಿನಲ್ಲಿ ನಡುಕ ವಿತ್ತು. ಸಮೀಪಕ್ಕೆ ಬಂದವಳು ಏನಾಡಬೇಕೆಂದು ತಿಳಿಯದೆ ಮೌನ ವಾಗಿದ್ದಳು.

"ನಾಳೆಯಿಂದ ಈ ಉದ್ಯಾನಪುಷ್ಪಗಳು ಪವಿತ್ರವಾಗುವುವು; ಅವು ಗಳನ್ನು ಮುಟ್ಟಿ ಹೊಲೆಗೆಡಿಸುವ ವ್ಯಕ್ತಿ ಇಲ್ಲಿ ಇರುವಂತಿಲ್ಲ" ಎಂದು ದಿನಕರ ನುಡಿಗೆ ಆರಂಭಿಸಿದ.

ಲೀಲೆ: ಹೂತೋಟವು ಹಾಳು ಬೀಳುವುದು!

ದಿನಕರ: ನಾನು ಬಂದಂದಿನಿಂದ—ಈ ಪುಷ್ಪಗಳು ಪಾಪಿಗಳೆನಿಸಿದುವು.

ಲೀಲೆ: ಹಾಗೆಂದವರು ಯಾರು?

ದಿನಕರ: ನಿಮ್ಮ ತಲೆಗೆ ಏರದ ಪುಷ್ಪ....

ಲೀಲೆ: ಬಹಳ ಪರಿಶ್ರಮಪಟ್ಟು—ಬಹಳ ಕೌಶಲದಿಂದ—ಪ್ರತಿಯೊಂದು ಹೂವಿನ ಹೃದಯಕ್ಕೂ ಹೊಸ ಕಂಪು ಸೊಬಗುಗಳನ್ನು ತುಂಬಿಸಿದ್ದಿರಿ. ಆ ಹೂಗಳು ಇಲ್ಲಿಯೆ ಇದ್ದು ಈ ತೋಟದ ಸಮಗ್ರ ಸೌಂದರ್ಯದಲ್ಲಿ ಸಮರಸವಾಗಿ ಬೆರೆತಿರಬೇಕು........ಎಂಬ ಒಂದೇ ಕಾರಣದಿಂದ....

ದಿನಕರ: ಇರಬಹುದು. ನಾಳೆ ಈ ಸಾಮ್ರಾಜ್ಯವೆಲ್ಲ ನಿಮ್ಮದು! ಪ್ರತಿಯೊಂದು ಹೂಬಳ್ಳಿ ಅಮ್ಮ! ಅಮ್ಮ ಎಂದು ತಾಯಿಯನ್ನು ಕೂಗಿ ಕರೆಯಬಹುದು.

ಲೀಲೆ: ದಿನಕರ........ಇದು ಸಂತೋಷ ಸಲ್ಲಾಪದ ಕಾಲವಲ್ಲ ........ನಿಮಗಾದುದನ್ನು ಕೇಳಿ ನನ್ನ ಎದೆ ಒಡೆಯಿತು........

ದಿನಕರ: ಮಾನವತಿಯೊಬ್ಬಳ ಶೀಲದ ಸಮರ್ಥನೆ ದೊರೆಯಿತೆಂದು ನೀವು ಹಿಗ್ಗಬೇಕಲ್ಲವೆ?

ಲೀಲೆ: ಇದರಲ್ಲಿ ರಹಸ್ಯವಿರುವಂತೆ ತೋರುತ್ತದೆ....ಕೋರ್ಟಿನಲ್ಲಿ ಆದ ತೀರ್ಪಿನಲ್ಲಿ ಏನೋ—ಅಸತ್ಯ ಧ್ವನಿ ಇದ್ದಂತೆ ತೋರುತ್ತದೆ.

ದಿನಕರ: ಕಾರಣವೇನು?

ಲೀಲೆ: ನ್ಯಾಯಸ್ಥಾನದಲ್ಲಿ ಸಾಕ್ಷ್ಯಕೊಟ್ಟವರಲ್ಲಿ ಒಬ್ಬರಾದರೂ ಪುರುಷರಂತೆ ಮುಖವೆತ್ತಿ ನೋಡಿ ಮಾತಾಡಲಿಲ್ಲ. ಪ್ರತಿಯೊಂದು ಮಾತನ್ನೂ ಹುಡುಕಿ, ಹೆಕ್ಕಿ, ತಪ್ಪಿ ಬೀಳುವ ಭೀತಿಯಿಂದ ಆಡಿದ ಹಾಗೆ ತೋರುತ್ತಿತ್ತು. ನೀವೊಬ್ಬರೆ ಧೈರ್ಯದಿಂದ ಆಡಿದಿರಿ; ಸುಖ ದುಃಖಗಳೆರಡನ್ನೂ ಸಮಭಾವದಿಂದ ಕಾಣುತ್ತಿದ್ದಿರಿ. ಇದರಲ್ಲಿ ಅರ್ಥವೇನೂ ಇಲ್ಲವೆ?

ದಿನಕರ: ಏನರ್ಥವಿದ್ದೀತು?

ಲೀಲೆ: ಏನೋ ಆತಂಕದಿಂದ, ಧರ್ಮಸಂಕಟದಿಂದ, ನೀವು ಸ್ವತಃ ಈ ಕಷ್ಟಕ್ಕೆ ಎದೆಯೊಡ್ಡಿದಿರಿ ಎಂದು.

ದಿನಕರ: ಕೋರ್ಟಿನಲ್ಲಿ ನ್ಯಾಯಮೂರ್ತಿಗಳಾಗಿ ಕುಳಿತಿದ್ದವರಿಗೆ ಈ ಅರ್ಥಮಾಡಿಕೊಳ್ಳುವ ಶಕ್ತಿ ಇರಲಿಲ್ಲವೆನ್ನುತ್ತೀರಾ?

ಲೀಲೆ: ಇಂತಹ ಅಪರಾಧಕ್ಕೆ ಇಂತಹ ಶಿಕ್ಷೆ—ಎಂದು ಪುಸ್ತಕದಲ್ಲಿ ಬರೆದಿದ್ದಾರೆ. ನ್ಯಾಯಾಧಿಕಾರಿಗಳು ತಮ್ಮ ಅಮೂಲ್ಯವಾದ ಆಯುಸ್ಸನ್ನೂ ಧನವನ್ನೂ ವೆಚ್ಚಮಾಡಿ ಆ ಪುಸ್ತಕಗಳನ್ನೆಲ್ಲ ಮಗುಚಿ ಹಾಕಿದ್ದಾರೆ. ಅಪರಾಧದ ರುಜುವಾತಿಗೆ ಬೇಕಾದಷ್ಟು ಸಾಕ್ಷ್ಯವಿತ್ತು; ನಿಮ್ಮ ನಡತೆಯ ಪರಿಶುದ್ಧತೆಗೆ ಯಾವ ಆಧಾರವೂ ಇರಲಿಲ್ಲ.

ದಿನಕರ: ನಾನೇಕೆ ಆಧಾರ ಕೊಡಬೇಕಾಗಿತ್ತು?

ಲೀಲೆ: ಸತ್ಯವನ್ನು ಸ್ಥಾಪಿಸುವುದಕ್ಕೆ........

ದಿನಕರ: ಸತ್ಯವು ನಡೆಯುವುದಕ್ಕೆ ಊರುಗೋಲು ಬೇಕಲ್ಲವೆ?

ಲೀಲೆ: ಅದನ್ನು ಸುಲಭವಾಗಿ ಗುರುತಿಸುವ ಮಂದಿ ಲೋಕದಲ್ಲಿಲ್ಲ........

ದಿನಕರ: ಹಾಗಾದರೆ ಸತ್ಯವು ಅಜ್ಞಾತವಾಸಿಯಾಗಿದೆ ಎನ್ನಿರಿ; ಅದನ್ನು ಹುಡುಕುವ ಉದ್ದೇಶ ಈ ಕಾನೂನಿನದು........ಕಾನೂನಿನ ಈ ಉದ್ದೇಶವನ್ನು ಭಂಗಮಾಡುವುದೇ ನನ್ನ ಆಶಯವಾಗಿತ್ತು....

ಲೀಲೆ: ಏತಕ್ಕಾಗಿ?

ದಿನಕರ: ನೋಡಿ! ಈ ದಿನಕರನೆಂದರೆ ಹಾರುವ ಹಕ್ಕಿ! ನೆಲಸುವ ಗೂಡೊಂದು ಅದಕ್ಕಿಲ್ಲ....ಬಂದರೆ ಹಿಗ್ಗುವ ಜನರಿಲ್ಲ; ಹೋದರೆ ನೋಯುವ ಎದೆಗಳಿಲ್ಲ. ಇಂತಹ ಒಂದು ಜೀವಕ್ಕೆ ಬೇಕಾದುದೇನು? ವಿದ್ಯಾಭ್ಯಾಸ ಮುಗಿದ ಮೇಲೆ ನಾಲ್ಕು ವರ್ಷದ ಪ್ರಯೋಗಾಭ್ಯಾಸ........ ಏಕಾಗಬಾರದು? ಬಹುಶಃ ಇಷ್ಟು ವರ್ಷ ಶಾಲೆಯ ಗೋಡೆಗಳೊಳಗೆ ಕಲಿತುದಕ್ಕಿಂತ ಹೆಚ್ಚಿನದನ್ನು ಈ ನಾಲ್ಕು ವರ್ಷಗಳು ಕಲಿಸಿಕೊಡಬಹುದು....ಸತ್ಯ ಸತ್ಯ ಎಂದು ಎಲ್ಲವನ್ನೂ ಬಿಚ್ಚಿದ್ದರೆ, ಎಳೆಯ ಮುಗುಳೊಂದು ಅರಳುವ ಮುಂಚೆಯೇ ಬಾಡಿಹೋಗುತ್ತಿತ್ತು.

ಲೀಲೆ ಬೆಪ್ಪಾಗಿ ನಿಂತಿದ್ದಳು. ನಡೆದುದೆಲ್ಲವನ್ನೂ ಕೇಳಬೇಕೆಂಬ ಕುತೂಹಲ ಅವಳ ಮುಖದಲ್ಲಿ ಕುಣಿದಾಡುತ್ತಿತ್ತು. ಎಲ್ಲವನ್ನೂ

ಹೇಳಬೇಕೆಂದು ದಿನಕರನ ಅಂತರಾತ್ಮವೂ ಪ್ರೇರಿಸಿತು. ಅವನು ಹೇಳ ತೊಡಗಿದ.

"ಕಲ್ಯಾಣಿ–ನಾನು–ಸುಬ್ಬಯ್ಯನವರ ಮಗ ಮನೋಹರ–ಒಂದೇ ಶಾಲೆಯಲ್ಲಿ ಅಭ್ಯಾಸಿಸಿದೆವು. ಕಲ್ಯಾಣಿಯ ಕುಲಗೋತ್ರಗಳು ಯಾರಿಗೂ ತಿಳಿದಿರಲಿಲ್ಲ. ಆಕೆಯು ರೂಪವತಿಯೆಂದು ತಿಳಿಸಬೇಕಾದುದೂ ಇರ ಲಿಲ್ಲ. ಅವಳು ಸುಳಿದ ವಾತಾವರಣವು ಪವಿತ್ರವೆಂದು ಭಾವಿಸುವವರು ಹಲವರಿದ್ದರು. ಮನೋಹರನು ಅಂತಹ ಒಬ್ಬ. ಅವಳೇಕೋ ಅವ ನನ್ನು ತಿರಸ್ಕಾರ ಭಾವದಿಂದ ಕಾಣುತ್ತಿದ್ದಳು........ಐಶ್ವರ್ಯದ ಸೊಕ್ಕಿ ನಿಂದ ಮನೋಹರನೊಮ್ಮೆ ಎಲ್ಲೆಯನ್ನು ಮುಂದುವರಿದ. ಕಲ್ಯಾಣಿ ಧೈರ್ಯದಿಂದ ಅವನನ್ನಿದಿರಿಸಿದಳು. ಶಾಲೆಯೊಳಗೆ ಗದ್ದಲವೇಳುವಷ್ಟ ರಲ್ಲಿ ನಾನು ಮಧ್ಯದಲ್ಲಿ ಪ್ರವೇಶಿಸಿ "ಆದುದು ಆಗಿಹೋಯಿತು; ಮುಂದೆ ಹೀಗಾಗದಂತೆ ನೋಡಿಕೊಳ್ಳೋಣ" ಎಂಬತಹ ಒಪ್ಪಂದಕ್ಕೆ ಇಬ್ಬ ರಿಂದಲೂ ಸಹಿಹಾಕಿಸಿದೆ. ಅಂದಿನಿಂದ ಕಲ್ಯಾಣಿಗೆ ನನ್ನಲ್ಲಿ ವಿಶೇಷವಾದ ಭಕ್ತಿಭಾವವಿತ್ತು; ಭಕ್ತಿಭಾವವು ಬೆಳೆದು ಸಲಿಗೆಯಾಗಿ ಮಾರ್ಪಟ್ಟಂತೆ ತೋರುತ್ತದೆ. ಸಲಿಗೆಯಲ್ಲಿ ಏನೋ ಮತ್ತೊಂದು ಭಾವ ಇದ್ದಂತೆಯೂ ತೋರಿತು. ತಮ್ಮನ್ನು ತಾವೇ ತಿಳಿಯದವರು—ಆ ಸ್ಥಿತಿಯಲ್ಲಿ ಏನು ಮಾಡುತ್ತಾರೋ ಅದನ್ನು ಮಾಡಲು ಆಕೆ ಸಿದ್ಧಳಾಗಿದ್ದಳು. ನಾನು ಮಹಾಯೋಗಿಯೇನೂ ಅಲ್ಲ; ಅಂದೂ ಆಗಿರಲಿಲ್ಲ; ಇಂದೂ ಅಲ್ಲ, ಆದರೆ, ಆಗ ಅವಳ ಆ ಬಗೆಯ ಬೇಟವು ಕಾಟವಾಗಿ ತೋರು ತ್ತಿತ್ತು; ಹಲವು ಪತ್ರಗಳನ್ನು ಬರೆದಳು; ಕಾರಣವಿಲ್ಲದೆ ಏನೋ ವಿಷಯ ಗಳನ್ನೆತ್ತಿ ಬರೆದಳು. ಹಲವು ವೇಳೆ ಬರಿಯ ಯೋಗಕ್ಷೇಮಗಳನ್ನು ಕೇಳುವ ನೆವದಿಂದ ನನ್ನ ಹೃದಯವನ್ನು ಮುಟ್ಟಿ ಹೊಡೆದು ಮೂದಲಿಸು ವಂತಹ ಮಾತುಗಳನ್ನೂ ಜೋಡಿಸುತ್ತಿದ್ದಳು.....ಯಾವುದಕ್ಕೂ ನನ್ನ ಉತ್ತರವಿರಲಿಲ್ಲ. ನಡುನಡುವೆ ಒಂದೆರಡು ಪತ್ರಗಳನ್ನು ಬರೆದಿರಲಿಲ್ಲ ಎಂದಲ್ಲ. ಅವುಗಳಲ್ಲಿದ್ದುದು ಅವಳು ಕೇಳಿದ ನೂರಾರು ಪ್ರಶ್ನೆಗಳಿಗೆ ಹೌದು–ಅಥವಾ ಅಲ್ಲ ಎಂಬ ಉತ್ತರ ರೂಪವಾದ ಶುಷ್ಕಪದಗಳು........ ಇದರಿಂದ ಆ ಮಾನಿನಿಗೆ ಸಿಡುಕಾಗಿದ್ದರೆ ತಪ್ಪೇನು? ವರ್ಷಗಳಲ್ಲಿ ಋತು ಭೇದವಾಗುವಂತೆ ಆಕೆ ನನ್ನಲ್ಲಿಟ್ಟಿದ್ದ ಮನೋಭಾವಗಳೂ ವರ್ಷಕ್ಕೆ

ನಾಲ್ಕಾರು ಬಾರಿಯಾದರೂ ಪರಿವರ್ತನ ಹೊಂದದೆ ಇರಲಿಲ್ಲ. ಕೊನೆಗೆ ಸ್ವಲ್ಪ ಬಿರುಸಾಗಿಯೇ ಬರೆಯಬೇಕಾಯಿತು. ಅದರ ಫಲವೇನೆಂಬು ದನ್ನು ಪ್ರತ್ಯಕ್ಷವಾಗಿ ಕಾಣುತ್ತಿರುವಿರಲ್ಲ?''

"ಸುಬ್ಬಯ್ಯನವರ ಮಗ ಮನೋಹರನಿಗೂ ಕಲ್ಯಾಣಿಗೂ ವೈರಸ್ಯ ಉಂಟಾದ ಮೇಲೂ ಆವರೇಕೆ ಈ ಸಂಚುಮಾಡಿದರು? ಎಂಬ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯುವುದಿಲ್ಲವಷ್ಟೆ?" ಎಂದು ಲೀಲೆ ಕೇಳಿದಳು.

ಹೌದು; ಉತ್ತರ ದೊರೆಯುವುದಿಲ್ಲ; ದೊರೆಯಬೇಕಾಗಿದ್ದರೆ ಚಂಚಲ ಬುದ್ಧಿಯ ಚೇಷ್ಟೆಗಳೇನು? ಎಂಬುದನ್ನು ಹುಡುಕಿ ನೋಡ ಬೇಕು-ಎಂದು ದಿನಕರ ಉತ್ತರವಿತ್ತ.

''ಇಂತಹ ಕುಟಿಲ ಸ್ವಭಾವದವಳ ಕಾಗದಗಳೇ ನಿಮ್ಮ ನಿರ್ದೋಷ ತೆಗೆ ಋಜುಪ್ರಮಾಣಗಳಾಗಿದ್ದಾಗ ಅವುಗಳನ್ನೇಕೆ ಮುಚ್ಚಿಟ್ಟಿರಿ?" ಎಂದು ಮತ್ತೊಮ್ಮೆ ಲೀಲೆ ಕೇಳಿದಳು.

''ಆ ಪ್ರಸ್ತಾವವೆ? ಆಕೆ ಇನ್ನೂ ಸ್ವಭಾವ ಸ್ಥೈರ್ಯವನ್ನು ಪಡೆ ಯದ ಹಸುಗೂಸೆಂದು ನನ್ನ ಭಾವನೆ. ವರ್ಷ ಹದಿನೆಂಟು ಕಳೆದಿಲ್ಲ. ಇನ್ನೆಷ್ಟೊ ಸುಗ್ಗಿಗಳು ಅವಳ ಭವಿಷ್ಯವನ್ನು ಬೆಳಗಿಸಲಿವೆ. ಎಲ್ಲವನ್ನೂ ಬಯಲುಮಾಡಿದರೆ, ಇಷ್ಟು ಕಾಲವನ್ನವಳು ಹೇಗೆ ದೂಡಬಹುದು? ಯೋಚಿಸಿರಿ. ಸಮಾಜ ನೀತಿಗೆ ಅಸಮ್ಮತವಾಗುವಂತೆ ತೋರುವ ನಡ ತೆಯ ಅಪಖ್ಯಾತಿಯನ್ನಿಟ್ಟುಕೊಂಡು ಈ ಹಸುಗೂಸು ಹೇಗೆ ಬಾಳುತ್ತಿರ ಬಹುದು? ನನ್ನ ನಾಲ್ಕು ವರ್ಷದ ಏಕಾಂತವಾಸ. ಕಷ್ಟ ನಿಷ್ಟುರ ಹೆಚ್ಚೊ ಅವಳ-ಅಬಲೆಯೆಂದೆನ್ನಿಸಿಕೊಳ್ಳುವ ಅನಾಥ ಬಾಲಿಕೆಯ ನರಕಯಾತನಾ ಮಯ ಜೀವನ ಸಂಕಷ್ಟಗಳು ಹೆಚ್ಚೊ........ಚೆನ್ನಾಗಿ ವಿಚಾರಿಸಿ ನೀವೇ ತೀರ್ಮಾನಿಸಿರಿ" ಎಂದ ದಿನಕರ..........ಲೀಲೆ ನಿರುತ್ತರಳಾದಳು. ಸ್ವಲ್ಪ ಕಾಲ ವಿಚಾರಮಗ್ನಳಾಗಿದ್ದಳು. ಕೊನೆಗೆ ''ಹಾಗಾದರೆ ನ್ಯಾಯಪತಿ ಗಳ ನಿರ್ಣಯ ಸರಿಯೆಂದು ನಿಮ್ಮ ಅಭಿಪ್ರಾಯವಲ್ಲವೆ?" ಎಂದಳು.

''ಲೋಕದ ನ್ಯಾಯನೀತಿಯ ಪಾಡೇ ಹಾಗೆ. ಅದು ಬಹಿರಂಗ ವ್ಯಾಪಾರಗಳನ್ನು ಶೋಧಿಸುತ್ತದೆ. ಅಂತರಂಗದ ಮರ್ಮವನ್ನು ಸ್ಪರ್ಶಿ ಸುವುದಿಲ್ಲ" ಎನ್ನುವಾಗ ದಿನಕರನ ಕಣ್ಣುಗಳೂ ಒದ್ದೆಯಾದುವು; ಲೀಲೆಗೂ ಅದು ತಿಳಿಯಿತು.

ಹೆಚ್ಚು ಮಾತುಕತೆಗಳು ನಡೆಯುಲಿಲ್ಲ, "ನಾಲ್ಕು ವರ್ಷದ ಸೆರೆ ಮನೆಯ ಶಿಕ್ಷಣವು ನನ್ನನ್ನು ಆ ಕಡೆ ಕರೆಯುತ್ತಿದೆ" ಎಂದು ದಿನಕರ ತನ್ನ ಹಜ್ಜೆಗಳನ್ನು ಕಿತ್ತು ಕತ್ತಲೆಕೋಣೆಯ ಕಡೆಗೆ ತಿರುಗಿದ.

ಅವನು ಸೇರಿದ ಕತ್ತಲೆಕೋಣೆಯನ್ನು ದಿವ್ಯ ಜ್ಯೋತಿಯೊಂದು ಬೆಳಗಿದಂತೆಯೂ, ತಾನಿದ್ದ ನೆಲ ಅಂಧಕಾರಮಯುವಾದಂತೆಯೂ ಲೀಲೆಗೆ ಭಾಸವಾಯಿತು.

* * * *

ದಿನಕರನ ಆರಡಿ ಎತ್ತರದ ಆಳಂಗ ಆ ಸೆರೆಮನೆಯ ವಠಾರದಿಂದ ಮಾಯವಾಗಿ ಇಂದಿಗೆ ಒಂದು ತಿಂಗಳು ಕಳೆದುಹೋಯಿತು. ಈಗ ಸೆರೆಮನೆಯ ಉದ್ಯಾನ ಹಾಳುಬಿದ್ದಿದೆ. ಅದರಲ್ಲಿದ್ದ ಗಿಡಬಳ್ಳಿಗಳು ಪ್ರೇಮಹಸ್ತಸ್ಪರ್ಶದ ಸುಖವಿಲ್ಲದೆ ಒಣಗಿಹೋಗಿವೆ. ಲೀಲೆ ಅಲ್ಲಿಗೆ ಸುಳಿದು ಮೆಟ್ಟುವುದಿಲ್ಲ. ಅಮ್ಮನವರು ಬಾರದುದರಿಂದ ಸೇವಕರೂ ಅಲಕ್ಷ್ಯಭಾವದಿಂದಿದ್ದಾರೆ. ಹೂಗಳು ಅರಳುತ್ತಿವೆ; ಯಾರ ದೃಷ್ಟಿಯನ್ನೂ ಆಕರ್ಷಿಸದೆ, ಯಾರ ಎದೆಗೂ ಸಂತೋಷ ಬೀರದೆ, ಮುದುಡಿ ಬಾಡಿ ಬೀಳುತ್ತಿವೆ.

ಒಂದು ಸಂಧ್ಯಾಕಾಲದಲ್ಲಿ ಲೀಲೆ ತನ್ನ ಕೋಣೆಯೊಳಗೆ ಏನೋ ಒಂದು ಚಿತ್ರ ಬರೆಯುವುದರಲ್ಲಿ ಆಸಕ್ತಳಾಗಿದ್ದಳು. ರಾಗರಸದಿಂದ ಚಿತ್ರಕ್ಕೆ ಜೀವಕೊಡುವುದಕ್ಕೆ—ಎಂಬಂತೆ ಏನೋ ಒಂದು ರಾಗಾಲಾಪ ಮಾಡುತ್ತಿದ್ದಳು. ಶಂಭುಲಿಂಗಯ್ಯ ಕೋಣೆಯೊಳಗೆ ಪ್ರವೇಶಿಸಿದ; ಲೀಲೆಗದು ತಿಳಿಯಲಿಲ್ಲ. ಕುರ್ಚಿಯೊಂದನ್ನು ಅವಳ ಬಳಿಗೆ ಸೆಳೆದು ಅಲ್ಲೆ ಕುಳಿತುಕೊಂಡು 'ಮಗು! ಏನನ್ನು ಬರೆಯುತ್ತಿ?' ಎಂದು ಕೇಳಿದ.

ಲೀಲೆ: ಮಹಿಳಾ ಸಭೆಯವರು ಒಂದು ಚಿತ್ರಕಲಾ ಸ್ಪರ್ಧೆಯನ್ನು ಏರ್ಪಡಿಸಿದರಲ್ಲವೆ?

ಶಂಭುಲಿಂಗಯ್ಯ: ಓಹೊ! ಅದರಲ್ಲಿ ಭಾಗವಹಿಸುತ್ತೀಯಾ? ಚೆನ್ನಾಯಿತು; ಪ್ರಥಮ ಬಹುಮಾನ ನಿನಗೆ ಬರಲಿ; ಆರಿಸಿದ ವಿಷಯ ವೇನು?

ಲೀಲೆ: ಭಾವನಾಮಯ ಚಿತ್ರಲೇಖನ. "ಆತ್ಮತ್ಯಾಗ" ಎಂಬ ಭಾವವನ್ನು ಪುರುಷಮೂರ್ತಿಯಲ್ಲಿ ಸ್ಫುಟಗೊಳಿಸಬೇಕೆಂದಿದ್ದೇನೆ....

ಶಂಭುಲಿಂಗಯ್ಯ: "ಏನು ಬರೆದೆ ನೋಡೋಣ" ಎನ್ನುತ್ತಾ ಚಿತ್ರವನ್ನು ಕಿತ್ತುಕೊಂಡ. ಭವ್ಯಾಕಾರದ ಪುರುಷಮೂರ್ತಿಯೊಂದು ಆಕಾಶದ ಕಡೆಗೆ ದೃಷ್ಟಿ ಬೀರುತ್ತದೆ. ಸ್ತ್ರೀ ವ್ಯಕ್ತಿಯೊಂದು ಕತ್ತಿ ಹಿಡಿದು ತಿವಿಯಲು ಸಿದ್ಧವಾಗಿ ನಿಂತಿದೆ. ಶಂಭುಲಿಂಗಯ್ಯ ಸೂಕ್ಷ್ಮವಾಗಿ ಅವಲೋಕಿಸಿ "ಈ ಚಿತ್ರದ ಹುಬ್ಬು ಆ ವ್ಯಕ್ತಿಯುದನ್ನು ಹೋಲುತ್ತಿದೆಯಲ್ಲ?" ಎಂದು ಕೇಳಿದ. "ಯಾವುದು ಯಾವುದನ್ನು ಹೋಲುತ್ತದೋ ಯಾರು ಬಲ್ಲರು? ಒಂದು ವೇಳೆ ಸಾಮ್ಯಗಳಿದ್ದರೇನು? ಸೌಜನ್ಯದ ಸದ್ಗುಣಗಳೂ ಸ್ವರೂಪವೂ ಎಲ್ಲೆಲ್ಲಿಯೂ ಒಂದೇ ತೆರನಾಗಿವೆಯಲ್ಲವೇ" ಎಂದು ಲೀಲೆ ತಂದೆಯ ಬಾಯಿಯನ್ನು ಮುಚ್ಚಿಸಿಬಿಟ್ಟಳು.

ಶಂಭುಲಿಂಗಯ್ಯ ಬಂದುದು ಚಿತ್ರವನ್ನು ನೋಡುವುದಕ್ಕಲ್ಲ. ಹಲವರ್ಷಗಳಿಂದ ಮುಂದೆ ಬೀಳುತ್ತಾ ಬಂದಿದ್ದ ವಿವಾಹದ ಮಾತನ್ನೆತ್ತುವುದಕ್ಕೆ. ಇನ್ನು ಹೀಗೆಯೇ ವಿಲಂಬಿಸುವುದು ಅನುಚಿತವೆಂದು ಪಿತೃತ್ವಧರ್ಮವು ಸಾರಿ ಹೇಳುತ್ತಿತ್ತು. "ಇನ್ನು ಅಲಕ್ಷಿಸುವುದು ಸಾಧ್ಯವಲ್ಲ; ನಿನ್ನ ಅಭಿಮತವೇನು ಲೀಲೆ—ಯೋಗ್ಯ ಸಂಬಂಧಗಳು ಹಲವಿವೆ" ಎಂದು ಶಂಭುಲಿಂಗಯ್ಯ ಮುಖ್ಯ ವಿಚಾರಕ್ಕೆ ಬಂದ.

ಲೀಲೆ: "ಆಗದೆಂದು ನಾನು ಸರ್ವಥಾ ಹೇಳಿಲ್ಲ."

ಶಂಭುಲಿಂಗಯ್ಯ: ಎಂದೂ ಹೇಳಿಲ್ಲ ಎಂಬುದನ್ನು ನಾನು ಬಲ್ಲೆ. ಸಾಮಾನ್ಯ ದೃಷ್ಟಿಯಿಂದ ಯೋಗ್ಯವೆಂದೆನ್ನಬಹುದಾದ ಸಂಬಂಧವೊಂದು ಘಟಿಸುವ ಸಂದರ್ಭವಿದೆ.

ಲೀಲೆ: ಯಾವುದದು?

ಶಂಭುಲಿಂಗಯ್ಯ: ಜಮೀನ್‌ದಾರ ಸುಬ್ಬಯ್ಯನವರ ಹೆಸರನ್ನು ನೀನು ಕೇಳಿದ್ದಿರಬಹುದು.

ಲೀಲೆ: ಇತ್ತೀಚೆಗೆ ಚೆನ್ನಾಗಿ ಕೇಳಿದ್ದೇನೆ.

ಶಂಭುಲಿಂಗಯ್ಯ: ಅವರ ಪ್ರಥಮ ಪುತ್ರ ಇನ್ನೂ ಅವಿವಾಹಿತನಾಗಿದ್ದಾನೆ. ನಾವು ಒಪ್ಪುವುದಾದರೆ ನೆಂಟಸ್ತಿಕೆ ಆಗಬಹುದು.

ಲೀಲೆ: ಸ್ತ್ರೀಮಾನರಕ್ಷಣೆಗಾಗಿ ಮೂಗು ಮುರಿಸಿಕೊಂಡವನಲ್ಲವೆ?

ಶಂಭುಲಿಂಗಯ್ಯ: ಹೌದು; ಆತನ ರೂಪವಲ್ಲದಿದ್ದರೂ ಗುಣ ಚೆನ್ನವೆಂದು ಲೋಕ ಹೇಳುತ್ತದೆ.

ಲೀಲೆ: ಲೋಕವೊ....ಅದು ಏನನ್ನೂ ಹೇಳುತ್ತಿದೆ.

ಶಂಭುಲಿಂಗಯ್ಯ: ನೀತಿಯಿದು–ಅನೀತಿಯಿದು; ಚಂದವಿದು; ಕೂರೂಪವಿದು—ಎಂದು ನಿಷ್ಕರ್ಷಿಸುವುದು ಲೋಕ ತಾನೆ?

ಲೀಲೆ: ಇರಬಹುದು; ಆದರೆ ಪ್ರತಿಯೊಂದು ವ್ಯಕ್ತಿಗೂ ಒಂದೊಂದು ಲೋಕವಿದೆ; ಎಂದರೆ ಒಂದೊಂದು ದೃಷ್ಟಿಗೆ ಲೋಕದ ಸ್ವರೂಪ ಒಂದೊಂದಾಗಿ ಗೋಚರಿಸುತ್ತದೆ....

ಶಂಭುಲಿಂಗಯ್ಯ: ನಿನ್ನಲ್ಲಿ ಚರ್ಚೆಮಾಡಲು ಬಂದಿಲ್ಲ. ಸ್ಪಷ್ಟವಾಗಿ ಹೇಳು; ನೀನು ಮದುವೆಯಾಗುವೆಯೊ? ಅಥವಾ ಹೀಗೆ ಚಿತ್ರಗಳ ಮೇಲೆ ಬಿದ್ದು ಹೊರಳಾಡುತ್ತ ಜೀವನವನ್ನು ಸಾಗಿಸುವೆಯೊ?

ಲೀಲೆ: ಬ್ರಹ್ಮಚರ್ಯವನ್ನು ಸಾಧಿಸುವ ಶಕ್ತಿ ನನಗಿಲ್ಲ....

ಶಂಭುಲಿಂಗಯ್ಯ: ಹಾಗಾದರೆ ಎಂದು ಪತಿಗೃಹದಲ್ಲಿ ದೀಪ ಹಚ್ಚುವೆ?

ಲೀಲೆ: ಆ ಕಾಲ ಬಂದಾಗ.

ಶಂಭುಲಿಂಗಯ್ಯ: ಆ ಕಾಲವನ್ನು ಎಂದು ನಿರೀಕ್ಷಿಸಬಹುದು?

ಲೀಲೆ: ನಾಲ್ಕು ವರ್ಷಗಳ ಅವಧಿ ಮುಗಿದಾಗ!

ಶಂಭುಲಿಂಗಯ್ಯ ತಟ್ಟನೆ ಕುರ್ಚಿಯಿಂದೆದ್ದು ಹೋಗುವುದಕ್ಕೆ ಉದ್ಯುಕ್ತನಾದ. ಲೀಲೆಯ ಮಾತು ಅವನಿಗೆ ರುಚಿಸಿತೊ ಇಲ್ಲವೊ ಹೇಳಬರುವಂತಿಲ್ಲ. ಹೀಗಿದ್ದರೂ ಈ ಮರುನುಡಿ ಅವಳ ಬಾಯಿಯಿಂದ ಹೊರಡಬಹುದೆಂದು ಅವನೆಣಿಸಿರಲಿಲ್ಲ—ಎಂಬುದು ಸ್ಪಷ್ಟ.

ಹೋಗುವ ತಂದೆಯ ಕೈಯನ್ನು ಹಿಡಿದು ನಿಲ್ಲಿಸಿ, ಮಾತಾಡುತ್ತಿದ್ದಾಗಲೆ ತಾನು ಬಣ್ಣ ಕೊಟ್ಟು ಬರೆಯುತ್ತಿದ್ದ ಚಿತ್ರವನ್ನು ತೋರಿಸುತ್ತಾ "ಈಗ ಹೇಗಾಯಿತು? ಆತ್ಮತ್ಯಾಗ ಎಂಬ ಭಾವವನ್ನು ಈ ಮುಖವು ಚೆನ್ನಾಗಿ ಹೊರಹೊಮ್ಮಿಸುವುದೇ? ಇಲ್ಲವೇ? ನೀನೇ ಹೇಳು!" ಎಂದು ಚಿತ್ರವನ್ನು ಅವನ ಮುಖದ ಇದಿರಾಗಿ ಎತ್ತಿ ಹಿಡಿದಳು.

ಶಂಭುಲಿಂಗಯ್ಯ: "ಸರಿಯಾಗಿ ಹೊಮ್ಮಿಸುತ್ತಿದೆ ಮಗು........ ಬಹಳ ಚೆನ್ನಾಗಿ....ಇಲ್ಲವೆನ್ನುವೆನೇ? ಎಂದು ಉದ್ಗರಿಸಿದ.

ಐದೇ ನಿಮಿಷಕ್ಕೆ ಮೊದಲು, ನೋಡಿದಾಗ ಆ ಚಿತ್ರದ ಕಣ್ಣುಗಳಲ್ಲಿ ಜೀವಕಳೆ ತುಂಬಿರಲಿಲ್ಲ. ಲೀಲೆಯ ಕೈಯ ಕುಂಚವು ವಿಚಿತ್ರ ಪರಿ

ವರ್ತನವನ್ನುಂಟುಮಾಡಿತ್ತು; ಈಗ ಹುಬ್ಬು ಮಾತ್ರವಲ್ಲ; ಕಣ್ಣುಗಳು ಕೂಡ ಆ ಹೊಸ ಕೈದಿಯ ಕಣ್ಣುಗಳನ್ನು ಹೋಲುತ್ತಿದ್ದು ನೋಟಕರ ಹೃದಯವನ್ನು ಚುಚ್ಚಿ ಕಿತ್ತು ಹೊರಗೆ ತೆಗೆಯುವಂತಿದ್ದುವು!

---

# ಹುಚ್ಚು ಹುಡುಗಿ

ಐಶ್ವರ್ಯದ ದಾರಿ ಕಳ್ಳದಾರಿ; ದಾರಿದ್ರ್ಯವು ರಾಜಬೀದಿಯಲ್ಲಿ ನಡೆದುಬರುತ್ತದೆ; ಎಂಬುದರ ಅನುಭವವು ಗಣೇಶ ಪ್ರಭುಗಳಿಗೆ ಆದುದು ಇತ್ತೀಚೆಗೆ. ಒಂದು ವರ್ಷದ ಹಿಂದೆ ಅವರು ಲಕ್ಷಪತಿಗಳಾಗಿದ್ದರು; ಇಂದು ಅಕಿಂಚನರು; ಕೊರಳುದ್ದ ಸಾಲದ ಕೆಸರಿನಲ್ಲಿ ಮುಳುಗಿ ಒದ್ದಾಡುತ್ತಿದ್ದಾರೆ! ಒಂದು ದಿನ ಪಾಲುಗಾರಿಕೆಯಲ್ಲಿದ್ದ ಅವರ ಬಟ್ಟೆ ಗಿರಣಿ ದಿವಾಳಿಯಾಯಿತು; ಇನ್ನೊಂದು ದಿನ ಅವರ ಒಡೆತನದಲ್ಲಿದ್ದ ಬೇಂಕಿನ ಕಬ್ಬಿಣದ ಪೆಟ್ಟಿಗೆಯೊಳಗಿದ್ದ ನಗನಟ್ಟುಗಳೆಲ್ಲ ತಮ್ಮ ಬಂಗಾರದ ಆಕಾರವನ್ನು ಕಳಚಿಟ್ಟು, ಹಿತ್ತಾಳೆಯ ನಿಜರೂಪದಲ್ಲಿ ಕಾಣಿಸಿಕೊಂಡುವು. ಮತ್ತೊಂದು ದಿನ ಆಸ್ತಿಯ ವ್ಯವಹರಣೆ, ನ್ಯಾಯಸ್ಥಾನವೇ ಅದನ್ನು ಕಿತ್ತು ಕೊಂಡಿತು. ಇಂದು ಅವರಿಗೆ ಉಳಿದುದು ಇಟ್ಟಿಗೆಯ ವ್ಯಾಪಾರಿ ಗಣೇಶ ಪ್ರಭುಗಳು ಎಂಬ ಹೆಸರು ಮಾತ್ರ. ಹೆಸರು ಸಾಲಗಾರರನ್ನು ಸಂಪಾದಿಸುತ್ತಿದ್ದಿತಲ್ಲದೆ ಮತ್ತೇನೂ ಇಲ್ಲ. ಮಾವ ಕೊಟ್ಟಿದ್ದ ಮನೆಯೊಂದು ಹೆಂಡತಿಯದಾಗಿತ್ತು.

ಒಂದು ಅಪರಾಹ್ನ ಪ್ರಭುಗಳು ಮನೆಚಾವಡಿಯಲ್ಲಿ ಮಲಗುವ ಕುರ್ಚಿಯ ಮೇಲೆ ದೇಹಭಾರವನ್ನಿಳಿಸಿ ಕುಳಿತಿದ್ದರು. ಸಾಂಪತ್ತಿಕ ವ್ಯವಹಾರಗಳಲ್ಲಿ ಸಿಕ್ಕುಸಂಕಟಗಳು ಬಂದಂದಿನಿಂದ, ಮನೆಯೊಳಗೆ ಇರುವುದು ಅಪರೂಪವಾಗಿದ್ದ ಪತಿದೇವರು ಇಂದು ಸ್ವಲ್ಪ ಬಿಡುಮಾಡಿ ಕುಳಿತುದನ್ನು ಕಂಡು ಗಂಗಮ್ಮ ಸಮೀಪದಲ್ಲಿಯೇ ಇದ್ದ ಬೆಂಚಿನ ಮೇಲೆ ಕುಳಿತುಕೊಂಡಳು. ಯಜಮಾನರು ಹಣಕಾಸಿನ ವಿಚಾರದಲ್ಲಿ ಕಷ್ಟ ಪಡುತ್ತಿದ್ದಾರೆ—ಎಂದಿಷ್ಟೆ ಆಕೆಗೆ ತಿಳಿದಿತ್ತಲ್ಲದೆ, ಸಂಪೂರ್ಣ ವಿವರಗಳು ತಿಳಿದಿರಲಿಲ್ಲ. ಮನೆಯಲ್ಲಿ ಒಂದು ನಿಮಿಷ ಇರದೆ ಊರೆಲ್ಲ ಅಲೆದಾಡಿದರೆ ಸಾಂಪತ್ತಿಕ ಸ್ಥಿತಿ ಹೇಗೆ ಸುಧಾರಿಸಬಹುದೆಂದೂ ಅವಳಿಗೆ ತಿಳಿದಿರಲಿಲ್ಲ. ಆದುದರಿಂದ ಆಕೆಯ ಮನಸ್ಸಿನಲ್ಲಿದ್ದ ಒಂದು ಶಂಕೆಯೆಂದರೆ, ತನ್ನ ಕುರಿತಾದ ಅಸಮಾಧಾನದಿಂದಲೆ ಅವರು ಹೊರಪಯಣ ಮಾಡುತ್ತಿದ್ದಾರೆಂಬುದು. ಪ್ರಭುಗಳ ಬಳಿಯಲ್ಲಿಯೇ ಕುಳಿತಿದ್ದ ಗಂಗಮ್ಮನಿಗೆ ಹೀಗೆ

ತೋರಿತು:–ಹೆಂಡತಿಯು ಗಂಡನ ಸುಖದುಃಖಗಳಲ್ಲಿ ಭಾಗಿನಿಯಂತೆ. ಇವರು ಸುಖದಲ್ಲಂತೂ ಪಾಲುಕೊಡಲೇ ಇಲ್ಲ; ದುಃಖದಲ್ಲಾದರೂ ಏಕೆ ಕೊಡಬಾರದು? ಆದುದೆಲ್ಲ ಆಗಿಹೋಯಿತು; ಆದುದೇನೆಂದು ಹೇಳುವುದೂ ಇಲ್ಲವಷ್ಟೆ? ಇದೇಕೆ? ಉತ್ತರ ದೊರೆಯಲಿಲ್ಲ. ಕಣ್ಣಿನಿಂದ ಹನಿಯೆರಡು ಉದುರಿತು. ಪ್ರಭುಗಳೂ ಇದನ್ನು ಕಂಡು ನಿಟ್ಟುಸಿರು ಕರೆದರು.

''ಗಂಗೂ! ಇಂದು ನಾವು ಕಡು ದರಿದ್ರರು; ನಮ್ಮದೆನ್ನುವ ಒಡವೆ ಏನೂ ಇಲ್ಲ; ಇದು ವರೆಗೆ ತಿಳಿಸಿರಲಿಲ್ಲ ನಿನಗೆ" ಎಂದರು ಪ್ರಭುಗಳು.

''ಹೂಂ........ದೇವರು ಕೊಡುತ್ತಾನೆ. ಆತನೇ ಕಿತ್ತುಕೊಳ್ಳುತ್ತಾನೆ. ಅದಕ್ಕೆ ನಾವೇನು ಮಾಡಲಾಗುತ್ತದೆ?" ಎಂದು ಗಂಗಮ್ಮ ಸಹಾನುಭೂತಿಯಿಂದ ಆಡಿದಳು.

''ದೇವರು ಮತ್ತೆಲ್ಲ ಕೊಡುತ್ತಾನೆ....ದುರ್ಬುದ್ಧಿಯನ್ನೂ ಕೊಡುತ್ತಾನೊ?"

"ಐಶ್ವರ್ಯದಿಂದ ಬಡತನಕ್ಕೆ ಇಳಿದವರೆಲ್ಲ ದುರ್ಬುದ್ಧಿಗಳೆ?"

''ಚರ್ಚೆ ಬೇಡ ಗಂಗು....ಅದರಿಂದ ಕಳೆದುಹೋದ ಹಣ ಪುನಃ ಕೈಸೇರುವುದಿಲ್ಲ–ಬಿಡು. ಇನ್ನು ಪ್ರಪಂಚವನ್ನು ಹೇಗೆ ಇದಿರಿಸಲಿ.... ಎಂಬುದೇ ಪ್ರಶ್ನೆ."

''ಹಣದ ವಿಚಾರ ಏನೂ ಆಗುತ್ತದೆ....ಪ್ರೇಮಕ್ಕೆ ದಾರಿದ್ರ್ಯವೊದಗದಿದ್ದರೆ...."

ಈ ಮಾತನ್ನು ಕೇಳಿ ಪ್ರಭುಗಳು ಅಳುವುದಕ್ಕೇ ತೊಡಗಿದರು; ಬಿಕ್ಕುಮಾತಿನಲ್ಲಿ ಏನೇನೋ ಹೇಳತೊಡಗಿದರು. ''ನಿನ್ನಂತಹ ಹೆಂಡತಿಯಿರುವಾಗ ಪ್ರೇಮ ದಾರಿದ್ರ್ಯ ಹೇಗೆ ಬಂದೀತು ಗಂಗೂ....ನೀನು ನನಗಾಗಿ ಏನೆಲ್ಲ ಮಾಡಲಿಲ್ಲ? ತಂದೆ ಸಂಪತ್ತನ್ನು ಕೂಡಿಟ್ಟು ಈ ಲೋಕವನ್ನು ಬಿಟ್ಟುಹೋದರು. ಅವರ ಸಂಚಯವನ್ನು ನಾನೇನು ಮಾಡಿದೆ? ಗೊತ್ತೇ ಇದೆ ನಿನಗೆ....ಅಮೇರಿಕವಂತೆ .... ಕೈಗಾರಿಕೆಯ ವಿದ್ಯಾನುಭವವಂತೆ....ಅದನ್ನು ಪಡೆದರೆ ಕೈಬೆರಳುಗಳ ತುದಿಯಿಂದ ಭಂಗಾರದ ನಾಣ್ಯಗಳೇ ಸುರಿಯುತ್ತವಂತೆ....ಹೀಗೆಂದು ಯಾರೇನೋ ತಲೆಗೆ ತುಂಬಿಸಿಬಿಟ್ಟರು. ಫಲವಾಗಿ ಪರದೇಶಕ್ಕೆ ಹೋದೆ; ಅಜ್ಞಾತವಾಸ

ಮಾಡಿದೆ. ನಿನ್ನ ನಗನಾಣ್ಯಗಳನ್ನೂ ಮಾರಿತಿಂದೆ. ಆಗ ನಿನ್ನ ಹೃದಯ ಸಂಕಟವೇನಿತ್ತೆಂಬುದನ್ನು ತಿಳಿಯುವಷ್ಟು ಮಾನವಗುಣ ನನ್ನಲ್ಲಿರಲಿಲ್ಲ....ಆರು ವರ್ಷಗಳು........ಆರು ವರ್ಷ ನಿನಗೆ ವೈಧವ್ಯ!"

ಈ ಮಾತು ಗಂಗಮ್ಮನ ಕಿವಿಗೆ ಶೂಲವಾಯಿತು. "ಹಾಗೆಲ್ಲ ಹೇಳಬೇಡಿ........ ಅಮೇರಿಕಕ್ಕೆ ಹೋಗಿಬಂದುದರಿಂದ ಏನು ನಷ್ಟವಾಯಿತು? ಏನಪರಾಧವಾಯಿತು? ಕಂಡೆವು........ನಮ್ಮ ಸುಖದ ದಿನಗಳನ್ನು ಕಂಡೆವು........ಮುಂದೆ ಕಾಣಬಾರದೆಂದು ಹೇಗೆ ಹೇಳೋಣ?" ಎಂದಾಕೆ ಪ್ರಭುಗಳ ಬಾಯಿಯನ್ನು ಕಟ್ಟುವುದಕ್ಕೆ ಪೇಚಾಡಿದಳು........

ಪ್ರಭು: ಅಮೇರಿಕಕ್ಕೆ ಹೋಗಿ ಬಂದುದರಿಂದ ಏನಾಯಿತೆಂದು ಕೇಳುತ್ತೀಯಾ ಗಂಗು....ಅದನ್ನು ಪ್ರತ್ಯಕ್ಷ ಕಾಣಲಿರುವೆ.....

ಗಂಗಾಬಾಯಿಗೆ ಅರ್ಥವಾಗಲಿಲ್ಲ. ಏನೋ ಒಂದು ಉದ್ವೇಗದಿಂದ ಹೀಗಾಡುತ್ತಿದ್ದಾರೆ ಎಂದವಳು ಭಾವಿಸಿಕೊಂಡಳು.

ಅಷ್ಟರಲ್ಲಿ ಬೀದಿಯ ಬಳಿಯಲ್ಲಿ ನಿಂತಿದ್ದ ಪ್ರಭುಗಳ ಮಗ ದಿನಕರ ಓಡುತ್ತೋಡುತ್ತಾ ಬಂದು—"ಯಾರೋ ಮನೆಯ ಮುಂದೆ ಇಳಿದಿದ್ದಾರೆ" ಎಂದು ಮನವಿಮಾಡಿಕೊಂಡ........

ಪ್ರಭುಗಳು ತಟ್ಟನೆ ಎದ್ದು "ಯಾರು?" ಎಂದು ಪ್ರಶ್ನಿಸಿದರು.

"ಯಾರೋ ತಿಳಿಯೆ........ಒಬ್ಬಳು ಹೆಂಗುಸು........ನಮ್ಮೂರಿನವಳಂತೆ ಇಲ್ಲ. ವಿಚಿತ್ರವಾಗಿ ತೋರುತ್ತದೆ" ಎಂದು ದಿನಕರ ನುಡಿದ.

"ಹೆಂಗುಸೆ? ಖಂಡಿತ........"

"ಹೌದು; ಹೆಂಗುಸು........"

"ಜೊತೆಯಲ್ಲಿ ಯಾರೂ ಇಲ್ಲವೆ?"

"ಇಲ್ಲ ......."

ನಾಯಕಸಾನಿ ಚೂಡಾಮಣಿಯ ಗಂಟನ್ನು ಅಪಹರಿಸಿದ ಪ್ರಭುಗಳ ಮುಂದೆ ಆಕೆಯ ರೂಪೇ ಕಾಣಿಸಿತು.

"ಎಷ್ಟು ವಯಸ್ಸಿರಬಹುದು........"

"ಹೆಚ್ಚು ಕಡಿಮೆ ಮೂವತ್ತು........"

"ಯಾರೇ ಇರಲಿ. ಮಾರಿ ಇರಲಿ; ಮಸಣಿ ಇರಲಿ; ಬಂದು ಕೇಳಿದರೆ ಇಲ್ಲ ಎಂದು ಬಿಡಿ.........ಈ ಮಾತನಾಡಿದರೆ ನಷ್ಟವಿಲ್ಲವಷ್ಟೆ"

ಎನ್ನುತ್ತ ಪ್ರಭುಗಳು ಒಳ ಕೈಸಾಲೆಗೂ ಅಲ್ಲಿಂದ ನೆಟ್ಟನೆ ಉಪ್ಪರಿಗೆಗೂ ಹತ್ತಿ–ಪ್ರಭುಗಳು ಮನೆಯಲ್ಲಿಲ್ಲ–ಎನ್ನಿಸಿಕೊಳ್ಳಲು ಸಿದ್ಧರಾದರು.

* * * *

ಬೀದಿಯಲ್ಲಿಳಿದು, ಪಕ್ಕದ ಮನೆಯಲ್ಲಿ ವಿಚಾರಿಸಿ, ಈ ಹೆಂಗುಸು ಪ್ರಭುಗಳ ಮನೆ ಮೆಟ್ಟಲನ್ನೇರುವಾಗ ಕೆಲನಿಮಿಷ ತಡವಾಯಿತು. ಗಂಗಮ್ಮನೊಬ್ಬಳೇ ಚಾವಡಿಯಲ್ಲಿ ಕುಳಿತು ತನಗೂ ಹೊರಗಣ ಪ್ರಪಂಚಕ್ಕೂ ಏನೂ ಸಂಬಂಧವಿಲ್ಲದವಳಂತೆ ಏನೋ ಒಂದು ಪುಸ್ತಕ ವನ್ನೋದುತ್ತಾ ಕುರ್ಚಿಯಲ್ಲಿ ಕುಳಿತ್ತಿದ್ದಳು. ಆಗಂತುಕಳು ಅಂಗಳ ದಲ್ಲಿ ಬರುವಾಗಲೂ, ಗಂಗಮ್ಮ ಪುಸ್ತಕದಲ್ಲಿ ಊರಿಹೋದ ನೋಟವನ್ನು ಆ ಕಡೆ ಬೀರಲಿಲ್ಲ.

"ಇದು ಯಾರ ಮನೆ........"ಎಂದು ಅಪರಿಚಿತಳು ಪ್ರಶ್ನಿಸಿದಳು.

"ಇದು ನಮ್ಮ ಮನೆ........" ಎಂದು ಗಂಗಮ್ಮ ಆಕೆಯನ್ನು ನಡು ನೆತ್ತಿಯಿಂದ ಅಂಗುಷ್ಟದ ವರೆಗೆ ಸಂದೇಹ ದೃಷ್ಟಿಯಿಂದ ನೋಡಿದಳು. ಮಾತಾಡುವ ಭಾವಭಂಗಿ........ಆಕಾರ........ವರ್ಣ........ಎಲ್ಲವೂ ಆಕೆ ವಿದೇಶದವಳೆಂದು ಸಾರಿ ಹೇಳುತ್ತಿದ್ದುವು.

"ಪ್ರಭುಗಳ ಮನೆ ಇದೇ ಎಂದು ಕೇಳಿದೆನಲ್ಲವೆ?"

"ಹೌದು; ಇದೇ"

"ಪ್ರಭು ಎಂದರೆ ಗಣೇಶ ಪ್ರಭು........"

"ಹೌದು........"

"ಅವರನ್ನೇ ನೋಡಬೇಕಾಗಿತ್ತು;" ಈ ಮಾತನ್ನು ಕೇಳುವ ವರೆಗೂ ಗಂಗಮ್ಮ ಆ ಹೊಸಬಳನ್ನು ಅಲ್ಲಿಂದಲ್ಲಿಗೇ ಕಳುಹಿಸಿಬಿಡಬಹುದೆಂದು ಆಸನವನ್ನು ಕೂಡ ಕೊಟ್ಟಿರಲಿಲ್ಲ. ಈಗ ನಿರುಪಾಯಳಾದಳು; ಒಂದು ಕುರ್ಚಿಯನ್ನು ಅವಳ ಮುಂದಿಟ್ಟು ಕುಳಿತುಕೊಳ್ಳಬಹುದೆಂಬುದನ್ನು ಸೂಚಿಸಿದಳು. ಅವಳು ಕುಳಿತುಕೊಂಡಳು.

"ನಾನು ಪರದೇಶದವಳು; ಪತ್ರಿಕೆಗಳಿಗೆ ಬರೆಯುವುದೇ ನನ್ನ ಉದ್ಯೋಗ; ಗಣೇಶ ಪ್ರಭುಗಳ ಹೆಸರನ್ನು ಯಾರೋ ನನಗೆ ಸೂಚಿ ಸಿದರು. ಅವರಿಂದ ಕೆಲ ಉಪಕಾರಗಳಾಗಬೇಕಾಗಿವೆ........ಎಂದರೆ, ಇಲ್ಲಿಯ ಕೈಗಾರಿಕೆಗಳ ವಿಷಯವಾಗಿ ಒಂದು ಲೇಖನ ಬರೆಯಬೇಕಾ

ಗಿದೆ; ಅವರು ಮಾಹಿತಿಕೊಡಲಾರರೆ? ಎಂದು ತಿಳಿಯುವುದಕ್ಕಾಗಿ ಬಂದೆ...."

ಗಂಗಮ್ಮನಿಗೆ ಈ ಮಾತೂ ವಿಚಿತ್ರವಾಗಿ ತೋರಿತು........ಲೇಖನವಂತೆ....ಅದಕ್ಕಾಗಿ ಇಷ್ಟೆಲ್ಲ ಓಡಾಟವಂತೆ....ಇದರ ರಹಸ್ಯವೇನು?

"ಅವರು ಮನೆಯೊಳಗೆ ಇಲ್ಲ...."

"ಇಲ್ಲ ಎನ್ನುತ್ತೀರಾ?"

"ಹೌದು; ಇಲ್ಲ...."

"ಈಗ ತಾನೇ ಹೊರಟುಹೋದರೇ?"

"ಬರಲೇ ಇಲ್ಲ...."

"ಊರೂರು ಅಲೆದಾಡಿದೆ; ಹಲವರನ್ನು ಕೇಳಿದೆ; ಪ್ರಭುಗಳ ಪತ್ತೆ ಯಾರಿಗೂ ಇಲ್ಲದಂತೆ ತೋರಿತು....ಈಗ ಮನೆಗೆ ಹೋಗಿ; ಅಲ್ಲಿ ಇದ್ದಾರೆ....ಕಾಣಬಹುದು....ಎಂದು ಹೊರಗೆ ನಿಂತಿದ್ದ ಗೃಹಸ್ಥರೊಬ್ಬರು ತಿಳಿಸಿದರು."

"ಇದ್ದರಲ್ಲವೇ ಕಾಣುವುದು?"

ತನ್ನ ವಿಷಯದಲ್ಲಿ ಬಹಳ ಸಂಶಯಭೀತಿಗಳು ಈಕೆಯಲ್ಲಿ ಉಂಟಾಗಿವೆಯೆಂದು ಅಪರಿಚಿತೆ, "ನೀವೇನೂ ಶಂಕಿಸಬೇಕಾಗಿಲ್ಲವಮ್ಮ....ನಾನು ಎಲ್ಲವನ್ನೂ ಬಲ್ಲೆ....ಅವರನ್ನು ಕಂಡು ಮಾತಾಡಿ ಹೋಗಬೇಕೆಂದೇ ಬಂದಿದ್ದೇನೆ...." ಎಂದಳು.

"ಎಲ್ಲವನ್ನೂ ಎಂದರೆ ಏನನ್ನೆಲ್ಲ?" ಎಂದು ಗಂಗಮ್ಮನಿಗೆ ತೋರಲಿಲ್ಲ; ಅಂತೂ ಇದೊಂದು ಅನಿವಾರ್ಯ ವಿಪತ್ತೆಂದು ಖಂಡಿತವಾಯಿತು; ಹೊರಗೆ ದಬ್ಬಿಸಲಾಗುತ್ತದೆಯೇ? ಬಂದವಳನ್ನು ಉಪಾಯದಿಂದ ಕಳುಹಿಸಿಕೊಟ್ಟರೆ ತಾನೇ ಗೆದ್ದೆನೆಂದು ಭಾವಿಸಿದಳು. ಸೀರೆಯುಟ್ಟ ಈ ಬಿಳಿ ಬಣ್ಣದ ಹುಡುಗಿ ತಮ್ಮ ಮನೆಯ ಮುಂದಿಳಿದುದನ್ನು ಬೀದಿಯುದ್ದದ ಜನರು ಕಂಡಿರಲೇ ಬೇಕು; ತನ್ನ ಕೆಲಸವಾಗದೆ ಕದಲುವ ಚಿಹ್ನೆಯನ್ನೂ ತೋರಿಸುವುದಿಲ್ಲವಲ್ಲ....

"ತೃಷೆಯಾಗಿದೆಯೇ ತಮಗೆ...." ಎಂದು ಗಂಗಮ್ಮ ಕೇಳಿದಳು.

"ತೃಷೆ....ತೃಷ್ಣೆ ಎಂದರೆ Thirst ತಾನೇ? ಈ ಎರಡು ಶಬ್ದಗಳಲ್ಲಿ ಎಂತಹ ಸಂಬಂಧ....ಇಂಗ್ಲೀಷಿನ ಆ ಪದಕ್ಕೆ ನೀರಡಿಕೆ ಎಂದು ನಿಘಂಟುವಿನಲ್ಲಿ ಬರೆದಿದೆ...."

"ಹೌದು....ನೀರಡಿಕೆಗೆ ಬೇಕೆ?"

"ಬೇಕೆಂದಲ್ಲ....ನೀವೇನು ಕೊಡುತ್ತೀರೋ ನೋಡಬೇಕಾದುದ ರಿಂದ....ನೀರಡಿಕೆಗೆ ಬೇಕೆನ್ನುತ್ತೇನೆ...."

ಗಂಗಮ್ಮ ಒಳಗೆ ಹೋಗಿ ಬೆಲ್ಲ ನೀರು ತಂದಳು.

"ಓಹೊ....ಇದೇ ನನಗೂ ಬೇಕಾದುದು....ನಿಮ್ಮ ಜನರು ಇದನ್ನು ಕೊಡುತ್ತಾರೆ ಎಂದು ಬಲ್ಲೆ....ಎಷ್ಟು ಚಂದದ ವಸ್ತು" ಎಂದು ಅಚ್ಚುಬೆಲ್ಲವನ್ನು ಕೈಯಲ್ಲಿ ಹಿಡಿದು ಒಂದರೆ ನಿಮಿಷ ನೋಡುತ್ತಿದ್ದು ನೀರು ಕುಡಿದಳು....ಗಂಗಮ್ಮ ಅವಳ ಹೆಸರನ್ನು ಕೇಳಿದಳು.

"ನನ್ನ ಹೆಸರು ಹೀರಾ...."

"ಊರು?"

"ಊರೊ....ಪ್ರಪಂಚವೇ....ಊರು ಯಾವುದಾದರೇನು? ಮನುಷ್ಯ ರೆಲ್ಲ ಒಂದೇ ತಾನೆ....ನಿಮ್ಮ ಭಾಷೆಯ ತೃಷ್ಣೆ....ನಮ್ಮ ಭಾಷೆಯ Thirst....ಈ ಪದಗಳೊಳಗೆ ಯಾವ ಸಂಬಂಧವಿದೆಯೋ ಅದೇ ಮನು ಷ್ಯರಿಗೂ...."

ಮತ್ತೆ ಪುನಃ ಪ್ರಭುಗಳ ಕುರಿತು ಪ್ರಶ್ನೆ ಬಂದು, ಅವರು ಖಂಡಿತ ವಾಗಿ ಇಲ್ಲ—ಎಂಬುದನ್ನು ಋಜುವಾಡುವುದಕ್ಕೆ ಗಂಗಮ್ಮ ಶಸ್ತ್ರಧಾರಿಣಿ ಯಾಗುವುದಕ್ಕೂ ಸಿದ್ಧಳು ಎಂಬುದು ಹೀರೆಗೆ ತಿಳಿದುಬಂತು. ಆಕೆ ಸಮಾಧಾನದಿಂದ ಹೇಳಿದಳು....

"ನೀವು ಹಸುಗಳನ್ನು ದೇವರ ಹಾಗೆ ಕಾಣುತ್ತೀರಲ್ಲವೆ?"

"ಹೂಂ....ಹಾಗೂ ಹೇಳಬಹುದು...."

"ಹಿಂದೂದೇಶದಲ್ಲಿ ಗೋಪೂಜೆ ಎಂಬ ಪುಸ್ತಕವೊಂದನ್ನು ಓದಿ ದ್ದೇನೆ....ಅದರಲ್ಲಿ ಹಾಗೆ ಬರೆದಿತ್ತು........ಈಗ ಒಂದು ಹಸು........ ನಿಮ್ಮ ಮನೆಯ ಮುಂದುಗಡೆ ನಿಂತು ಅಂಬಾ! ಎಂದು ಕೂಗಿದರೆ ಏನು ಮಾಡುತ್ತೀರಿ? ಹೊಡೆದು ಓಡಿಸುತ್ತೀರಾ?"

"ಇಲ್ಲ...."

"ನನ್ನಿಂದ ನಿಮಗೆ ಯಾವ ಕೆಡುಕೂ ಆಗುವಂತಿಲ್ಲ....ಪ್ರಭು ಗಳನ್ನು ಕಂಡು ಮಾತಾಡಿ ಹೋಗುತ್ತೇನೆ....ನಾನು ನೋಡುವುದರಿಂದ

ಅವರಿಗೆ ಉಪಕಾರವಲ್ಲದೆ ಕೇಡಿಲ್ಲ. ಈಗ ಇಲ್ಲದಿದ್ದರೆ ಬರುವ ವರೆಗೆ ಕಾದಿರುತ್ತೇನೆ........ನಾನೊಂದು ಹಸು ಎಂದು ಭಾವಿಸಿರಿ........ಅಂಬಾ ಎಂದು ಕೂಗಿ ನಿಮ್ಮ ಮುಂದೆ ನಿಂತರೆ ದೊಡ್ಡ ತಪ್ಪುಮಾಡಿದ ಹಾಗಾ ಯಿತೇ?"

ಕೊಡುವ ಉತ್ತರವೇನೆಂದು ಗಂಗೆಗೆ ತಿಳಿಯಲಿಲ್ಲ. ಆಕೆಯಲ್ಲಿ ದುರುದ್ದೇಶವಿಲ್ಲವೆಂಬುದನ್ನು ಮುಖಮುದ್ರೆ ಡಂಗುರ ಸಾರುತ್ತಿತ್ತು........

"ನೀವು ಕೆಡುಕುಮಾಡುವವರಲ್ಲವಮ್ಮಾ........ಮುಖ ಹಾಗೆ ಹೇಳುತ್ತದೆ........ಆದರೆ...."

"ಮುಖದ ಮಾತು ನಿಮ್ಮ ಕಿವಿಗೆ ಕೇಳಿಸಿದರೆ ನಾನು ಬದುಕಿದೆ."

"ಆದರೆ....ಇವರು ಇಡೀ ದಿನ ಬರುವ ಹಾಗಿಲ್ಲವಮ್ಮ...."

"ರಾತ್ರಿ ನಿಮ್ಮ ಉಪಚಾರವನ್ನು ಸ್ವೀಕರಿಸಿ...."

"ನಮ್ಮ ಉಪಚಾರವೆ? ನಿಮ್ಮಂತಹ ನಯಗಾರಿಕೆಯ ಜೀವನಕ್ಕೆ ನಮ್ಮ ಉಪಚಾರ...."

"ಬೇರೇನೂ ಬೇಡ....ಪ್ರಭುಗಳನ್ನು ನೋಡಿ ಹೋಗಬಹು ದೆಂದು ನೀವು ಸಮ್ಮತಿಕೊಟ್ಟರೆ....ಅದಕ್ಕಿಂತ ಹೆಚ್ಚಿನ ಉಪಚಾರ ವಿಲ್ಲ...."

ಗಂಗೆಯ ಮಾತು ಮತ್ತೊಮ್ಮೆ ಕಟ್ಟಿಹೋಯಿತು....

"ಹೂಂ...." ಎಂಬ ಧ್ವನಿ ಸಮ್ಮತಿಯನ್ನೊ ಅಸಮ್ಮತಿಯನ್ನೊ ಸೂಚಿಸುವಂತೆ ಕಂಠದಿಂದ ಹೊರಬಿದ್ದಿತು. ಇಂತಹ ಹಟಗಾರ್ತಿ ಯಾರಾಗಿರಬಹುದೆಂದು ತಿಳಿಯುವ ಕುತೂಹಲಕ್ಕಿಂತ ಅವಳ ರೂಪ ವನ್ನು ಪರೀಕ್ಷಿಸುವುದು ವಿಹಿತವೆಂದವಳಿಗೆ ತೋರಿತು.

ಎಂತಹ ಭವ್ಯರೂಪ! ಸಾವಿರ ಮಂದಿಯ ಮಧ್ಯದಲ್ಲಿ ಏಕೈಕವಾಗಿ ಎದ್ದು ಕಾಣಬಹುದಾದ ಸೌಂದರ್ಯ! ಬಿಳಿ ನಸುಗೆಂಪಿನ ಬೆರಕೆ ಬಣ್ಣ. ಸ್ವಾತಂತ್ರ್ಯ ಪ್ರಭುತ್ವಗಳನ್ನು ಸೂಚಿಸುವ ನೀಳವಾದ ಮೂಗು. ಕುಂಚ ದಲ್ಲಿ ಕಪ್ಪು ಬರೆ ಎಳೆದಂತೆ ನೀಳವಾಗಿಯೂ ಸ್ವಲ್ಪ ಡೊಂಕಾಗಿಯೂ ಇರುವ ಹುಬ್ಬು. ಕೆಂಪು ಕಾರುವ ನುಣ್ದುಟಿ. ಎತ್ತರವಾದ ನಿಲವು ತೆಳುವಾದ ಶರೀರ. ಮಾತು ಮಾತಿಗೆ ಹೃದಯೋನ್ನತಿಯನ್ನು ಹೊರ ತುಳುಕಿಸುವ ಹಾವಭಾವಗಳು. ಶೃಂಗಾರದ ಮುದ್ದೆಯಂತಿದ್ದ ಅವಳ

ಮುಖದಿಂದ ಪ್ರಾಯವನ್ನೂಹಿಸುವುದು ಕಷ್ಟವೇ ಆಗಿತ್ತು ಅಥವಾ ಪ್ರಾಯದ ಗೊಡವೆಯೇ ಬೇಕಾಗಿಲ್ಲ. ವಯಸ್ಸಿನ ಪರಿಣಾಮಕ್ಕೆ ಬಾಗದ ಗಟ್ಟಿ ಚೆಲುವಿನ ಮೂರ್ತಿಯವಳು............ಎನ್ನುವುದು ಯಾರಿಗೂ ಕಾಣುವ ವಿಷಯ. ಬರಿಯ ಸೌಂದರ್ಯ ಸೌಜನ್ಯಗಳ ವಿಮರ್ಶಕಳಾಗಿ ಮಾತ್ರ ಇರುತ್ತಿದ್ದರೆ, ಗಂಗಮ್ಮ ಅವಳ ಶೋಭಾವಿಲಾಸಗಳನ್ನು ಕಂಡು ಕೈಚಪ್ಪಾಳೆ ಹೊಡೆಯುತ್ತಿದ್ದಳು. ಆದರೆ–ಅವಳು ವಿಮರ್ಶಕಿ ಗಂಗಮ್ಮ ನಲ್ಲ–ಪ್ರಭುಗಳ ಅರ್ಧಾಂಗಿ ಗಂಗಮ್ಮ! ಮಿಂಚುಬಳ್ಳಿಯಂತೆ ಬಾಗಿ ಬಳುಕಿ ಬಂದ ಚೆಲುವೆಯರು ಸಿಡಿಲಾಗಿ ಹೊಡೆಯುವುದಿದೆ, ಎಂಬುದು ಆಕೆಯ ವೇದನಾಮಯ ಜೀವನದ ಅನುಭವವಾಗಿತ್ತು. ಇದು ಇನ್ನೊಂದು ಮಳೆಗಾಲದ ಪೂರ್ವ ಸೂಚನೆಯೆ?

ಸೀರೆಯುಟ್ಟ ಬಿಳಿ ಹುಡುಗಿ ಮನೆಯನ್ನು ಬಿಟ್ಟು ಕದಲುವ ಚಿಹ್ನೆ ತೋರಲಿಲ್ಲ. ಅದರ ಬದಲಾಗಿ ಬೀದಿಯ ವರೆಗೆ ಹೋಗಿ ಕಾರಿನಲ್ಲಿದ್ದ ಪೆಟ್ಟಿಗೆಯನ್ನು ತಾನೆ ಹಿಡಿದುಕೊಂಡು ಬಂದು, ಒಳಗಿರಿಸಿದಳು. ಇಡೀ ಮನೆ ತನ್ನದೇ ಎನ್ನುವಷ್ಟು ಅಧಿಕಾರ ತೋರಿಸುವಂತಿದ್ದಳು. ಗಂಗಮ್ಮ ನಿಜವಾಗಿ ಆಕೆಯ ಮುಖದಲ್ಲಿ ಅವಲಕ್ಷಣಗಳನ್ನು ಕಾಣಲಿಲ್ಲ. ಆದರೆ ಹೀಗೆ ಒಡೆತನ ತೋರಿಸುತ್ತಿರುವಳಲ್ಲ?

ಹೀಗೆ ಗಂಗಮ್ಮನನ್ನು ಮಾತಾಡಿಸಿದಳು. ''ನಿಮಗೆ ಮಕ್ಕಳೆಷ್ಟಮ್ಮ!'' ಎಂಬ ಪ್ರಶ್ನೆ ಬಂತು....

''ಯಾಕಮ್ಮ ಮಕ್ಕಳು....ಯಾವ ಸುಖವನ್ನು ಅನುಭವಿಸುವುದಕ್ಕೆ....?'' ಎಂದು ಗಂಗಮ್ಮ ಪ್ರತ್ಯುತ್ತರವಿತ್ತಳು....

ಮಕ್ಕಳು ಅಲ್ಲಿಯೇ ಅಂಗಳದಲ್ಲಿ ಈ ವಿಚಿತ್ರ ದೃಶ್ಯವನ್ನು ಆಶ್ಚರ್ಯದಿಂದ ಬಾಯ್ಬಿಟ್ಟು ನೋಡುತ್ತಿದ್ದರು. ಎರಡು ವರ್ಷದ ಮುದ್ದು ಮಗುವೊಂದು ಮಾತ್ರ ಅತ್ತಿತ್ತ ಓಡುತ್ತಾ ಬಂದು ಆಗಂತುಕಳು ಇಟ್ಟಿದ್ದ ಪೆಟ್ಟಿಗೆಯನ್ನು ತನ್ನ ಎರಡೂ ಕೈಗಳಿಂದ ಬಲವಾಗಿ ಬಡಿಯತೊಡಗಿತು.

ಬಂಡವಳು ''ಎಂತಹ ಮುದ್ದು ಕೂಸಮ್ಮ....'' ಎನ್ನುತ್ತ ಅದನ್ನು ಬಾಚಿ, ತಬ್ಬಿ, ಬಲವಾಗಿ ಮುದ್ದಿಟ್ಟಳು. ಮಗು ಅತ್ತಿತು. ಮುಂದೇನು ಮಾಡಬೇಕೋ ತಿಳಿಯದೆ ಗಂಗಮ್ಮ ತಬ್ಬಿಬ್ಬಾದಳು.

* * * *

ಹೀಗೆ ಹೆಚ್ಚು ಸಮಯ ಕಳೆಯಲಿಲ್ಲ. ಪ್ರಭುಗಳು ದಡದಡನೆ ಸೋಪಾನವನ್ನಿಳಿದು ಓಡಿ ಬಂದು ಗಂಗಮ್ಮ ಹೀರೆಯರ ಘುಧ್ಯದಲ್ಲಿ ಸ್ಥಳ ವನ್ನಾಕ್ರಮಿಸಿ "ಹೇರಿಸನ್! ನನ್ನ ಸರ್ವಾಪರಾಧಗಳನ್ನು ಕ್ಷಮಿಸ ಲಾರೆಯಾ?" ಎಂದು ಕೈಮುಗಿದು ನಿಂತರು.

ಗಂಗಮ್ಮ ನೆಟ್ಟನೆ ಮನೆಯೊಳಗೆ ನುಗ್ಗಿ, ದೇವರಕೋಣೆಯನ್ನು ಪ್ರವೇಶಿಸಿ–'ದೇವರೆ ನಾನು ಇನ್ನೇನೆಲ್ಲ ನೋಡಲಿದೆಯೊ' ಎಂದು ಉದ್ದಂಡ ನಮಸ್ಕಾರ ಮಾಡಿದವಳು ಸ್ವಲ್ಪ ಕಾಲ ಹಾಗೆಯೇ ಬಿದ್ದಿದ್ದಳು. ದೇವರು ಕಣ್ಣು ತೆರೆಯದೆ ತಾನು ಏಳುವಂತಿಲ್ಲ—ಎಂದು ಮುಷ್ಕರಹಿಡಿದ ಳೇನೋ....

"ಅಪರಾಧ ಯಾರದೂ ಇಲ್ಲ;" ಎಂದು ಹೇರಿಸನ್ ಅಥವಾ ಹೀರೆ ಸಮಾಧಾನಪಡಿಸಿದಳು.

ಪ್ರಭುವಿನ ಶರೀರ ಥರಥರನೆ ಕಂಪಿಸುತ್ತಿತ್ತು. ಏನು ಮಾತಾಡ ಬೇಕೋ ತಿಳಿಯದು. ಅಪರಾಧ ನನ್ನದು ಎಂಬ ಮಾತಿನಿಂದ, ಹೇರಿ ಸನ್ನಳ ಬಿರುಸನ್ನು ಕಡಿಮೆಮಾಡಬಹುದೆಂದು ಪ್ರಭು ಭಾವಿಸಿದ್ದ. ಆದರೆ ಕಡಿಮೆಮಾಡಬಹುದಾದ ಬಿರುಸು ಅಲ್ಲಿರಲಿಲ್ಲ. ಅದರ ಬದಲಾಗಿ ಮುಖದ ಮೇಲೆ ಮೊಳೆ ಹೊಡೆದು ಅಂಟಿಸಿದಂತಹ ಮುಗುಳು ನಗು ಪ್ರಭುವಿನ ಪೌರುಷವನ್ನು ಮೂದಲಿಸುವಂತಿತ್ತು. ಅವಳು ಶಪಿಸಿದ್ದರೆ, ಜರೆದಾಡಿದ್ದರೆ—ಅಥವಾ ಮುಷ್ಟಿಯಿಂದ ಬಲವಾದೊಂದು ಏಟುಕೊಟ್ಟಿದ್ದರೆ, ಸಹನೀಯವಾಗುತ್ತಿತ್ತು; ಈ ನಗುವನ್ನು ಸಹಿಸಲಾಗಲಿಲ್ಲ. "ಪ್ರಭುಗಳೆ....ಹೇಗಿದ್ದೀರಿ?" ಎಂದು ಹೇರಿಸನ್ನಳೇ ಮಾತಿಗೆ ಆರಂಭ ಮಾಡಬೇಕಾಯಿತು.

"ಇರುವುದು ಹೇಗೆ? ಶವವಾಗಿದ್ದೇನೆ ಹೇರಿಸನ್!"

"ಪ್ರಪಂಚವು ಜೀವಂತವಾಗಿರುವಾಗ ನಾವೇಕೆ ಜೀವಂತರಾಗಿರ ಬಾರದು? ಇಂತಹ ನಿರಾಶೆಗೇನು ಕಾರಣ?"

"ಬೇರೇನೂ ಇಲ್ಲ; ನನ್ನ ಹಿಂದಿನ ಜೀವನ ಮುಂದಿನದನ್ನು ನುಂಗಿಬಿಟ್ಟಿದೆ....ಇರಲಿ; ತಮ್ಮ ಆಗಮನ ಎಂದಾಯಿತು?"

"ಆ ಮಾತನ್ನು ಕೇಳುತ್ತೀರಾ....ಮನಸ್ಸಿನ ಆಗಮನ ಅಂದೇ ಆಗಿತ್ತು; ಶರೀರವು ಬಂದು ವರ್ಷವಾಯಿತು."

''ನನ್ನ ಒಬ್ಬನ ಅನುಭವದಿಂದ ಭಾರತೀಯರ ವಿಷಯದಲ್ಲಿ ದುರಭಿಪ್ರಾಯ....''

''ಎಂದೂ ಇಲ್ಲ ಪ್ರಭುಗಳೇ! ಒಳ್ಳೆಯದೂ ಕೆಟ್ಟದೂ ಎಲ್ಲ ನಾಡಿನಲ್ಲಿ ಸರಿ ಪಾಲಾಗಿ ಜೀವನದಲ್ಲಿ ಬೆರೆತುಹೋಗಿದೆ........ನೀವಾದರೂ ಮಾಡಿದ ಅಪರಾಧವೇನು?''

''ನಿಷ್ಪಾಪಳಾದ ಬಾಲಿಕೆಯೊಬ್ಬಳನ್ನು ವಂಚಿಸಿದೆ.''

''ಹೇಗೆ ವಂಚಿಸಿದಿರಿ?''

''ಹೇರಿಸನ್ ಹೋಗಿ ಹೀರೆಯಾದಾಗಲೆ ವಂಚಿಸಿದೆನಲ್ಲವೆ?''

''ಪರಸ್ಪರವಾಗಿ ವಂಚಿಸಿದುದು ನಮ್ಮ ಪ್ರಾಯ; ನಮ್ಮ ಮನಸ್ಸಿನ ಕತ್ತಲೆ!''

''ನಾವಾರು? ಕತ್ತಲೆ ಯಾರದು?''

''ಎಲ್ಲ ನಮ್ಮದೆ; ತಮೋಮಯರೂ ನಾವೆ; ಹತ್ತು ವರ್ಷಗಳ ಹಿಂದಿನ ಅಳತೆ ಶರೀರಕ್ಕೆ ಹೇಗಿರುವುದೋ, ಹಾಗೆ ಮನಸ್ಸಿಗೂ ಇದ್ದಿರಬಹುದಲ್ಲವೆ?''

''ಬಹುದು....''

''ನಮ್ಮ ಮನಸ್ಸುಗಳು ಗಿಡ್ಡವಾಗಿದ್ದ ಕಾಲದಲ್ಲಿ ಏನೋ ನಡೆದು ಹೋಯಿತು....''

''ನಿನ್ನ ಅರಮನೆ....ನಿನ್ನ ಹೂದೋಟ....ಅಲ್ಲಿ ಅಲೆದಾಡಿದ ಸಂಜೆಗಳು....ನೀನು ನನಗಿತ್ತ ಭಾಷೆ....ನಾನು ಮಾಡಿದ ಪ್ರತಿಜ್ಞೆ.... ಇದೆಲ್ಲವನ್ನೂ ಸ್ಮರಿಸುವಾಗ....''

''ಎಲ್ಲವನ್ನೂ ಸ್ಮರಿಸಿರಿ....ಸ್ಮರಿಸಿ ಹಾಗೆ ಏಕೆ ಆಯಿತು? ಏಕೆ ಆಗಬಾರದಿತ್ತು? ಎಂಬುದನ್ನು ವಿಮರ್ಶಿಸಿರಿ....''

''ಅಂದಿನ ಪ್ರಭು ಸತ್ತುಹೋದ; ಇಂದು ನಿನ್ನ ಮುಂದೆ ಗೋಚರಿಸುವುದು ಆತನ ಪ್ರೇತ!''

''ಎಂದೂ ಅಲ್ಲ.......ಒಪ್ಪಲಾರೆ ಪ್ರಭುಗಳೆ........ಅಂದು ಚಿಕ್ಕ ಮಗುವಿನಂತಿದ್ದ ಜೀವ ಇಂದು ಆಳೆತ್ತರಕ್ಕೆ ಬೆಳೆದಿದೆ....ಅಂದಿನದೆಲ್ಲ ಒಂದು ಅಪ್ರಬುದ್ಧತೆ....ಅವಿವೇಕ....ಎಂದು ತೋರುತ್ತದೆ. ಒಂದು ವಯಸ್ಸಿನಲ್ಲಿ ಪ್ರತಿಯೊಬ್ಬನೂ ಒಬ್ಬಳೂ ಅವಿವೇಕಿಗಳಾಗಿರುತ್ತಾರೆ.

ಎಂಬುದನ್ನು ಒಪ್ಪಿಕೊಂಡರೆ, ಹೀಗೆಲ್ಲ ಹಲುಬುವುದಕ್ಕೆ ಕಾರಣವುಂಟೆ ಪ್ರಭುಗಳೆ? ಮರೆತುಬಿಡಿ........ಎಲ್ಲವನ್ನೂ ಮರೆತುಬಿಡಿ....ಹೊಸ ಗಾಳಿ ಬೀಸಲಿ........ಹೊಸ ಬೆಳಕು ಸೂಸಲಿ........ಹೊಸ ಸೃಷ್ಟಿ ಉದಿಸಲಿ...... ನಾವೂ ಹೊಸಬರಾಗೋಣ....''

ಪ್ರಭು ಆಕೆಯ ಪಾದಕ್ಕೆ ಅಡ್ಡಬಿದ್ದ. ಇದನ್ನು ನೋಡುತ್ತಿದ್ದ ಅವಳ ಮುಖದಲ್ಲಿ ವಿಚಿತ್ರ ವಿಕಾರವುಂಟಾಯಿತು.

''ಚೆಲುವೆಯಾದ ಹೆಂಡತಿ–ಮುದ್ದು ಮಕ್ಕಳು........ಕೌಟುಂಬಿಕ ಸುಖ ತುಂಬಿ ತುಳುಕುವ ಈ ಮನೆಯನ್ನು ಒಡೆದು ಧೂಳೀಪಟಮಾಡುವುದಕ್ಕೆ ಬಂದವಳಲ್ಲ ನಾನು...." ಎಂದವಳು ಪ್ರಭುಗಳನ್ನು ಹಲವು ಬಗೆಯಿಂದ ಬೇಡಿಕೊಂಡ ಮೇಲೆ, ಅವರು ಎದ್ದು ನಿಂತರು. ಇಬ್ಬರೂ ಕುರ್ಚಿಯಲ್ಲಿ ಕುಳಿತರು. ಸ್ವಲ್ಪ ಕಾಲ ಮೌನ. ಅನಂತರ ಅವಳೇ ಆಡಿದಳು.

ಆದುದೆಲ್ಲ ಆಗಿಹೋಯಿತು. ಏನೋ ಒಂದು ಬಗೆಯ ಹುಚ್ಚಿನಿಂದ ನಮ್ಮೊಳಗೆ ವಿವಾಹದ ಶಪಥ ಆಯಿತೆನ್ನಿ. ಶಪಥವು ಫಲಿಸದಿರುವ ಕೆಲ ಕಾರಣಗಳೂ ಒದಗಿದುವು........ಅವನ್ನೆಲ್ಲ ಅಲ್ಲಿಯೇ ಬಿಡಿರಿ........ ಜೀವನಕ್ಕೊಂದು ಗುರಿಯಿದ್ದರೆ ಎಂತಹ ಆತಂಕ ಬಂದರೂ ದಾರಿ ಬಿಡದೆ ನಡೆಯಲಾಗುತ್ತಿದೆ.....''

''ನನಗದು ಆಗ್ಬೇಕಾದ ಅನುಭವ."

''ನೀವು ಊರನ್ನು ಬಿಟ್ಟ ಮೇಲೆ ನನ್ನ ಮನಸ್ಸೂ ನಿಮ್ಮ ಹಿಂದೆಯೇ ಹೊರಟು ಕೆಲ ವರ್ಷಗಳನ್ನು ಕಷ್ಟದಿಂದ ನೂಕಿದೆ. ನಡುವೆ ತಾಯಿ ತಂದೆ ಈ ಲೋಕವನ್ನು ಬಿಟ್ಟುಹೋದರು........ಅಪಾರ ದ್ರವ್ಯ ರಾಶಿಯನ್ನು ಬಿಟ್ಟುಹೋದರು. ಮಧ್ಯೆ ನನ್ನ ಜೀವನದಲ್ಲಿಯೂ ಒಂದು ಬಿರುಗಾಳಿಯೆದ್ದಿತು. ನಾನು ನಿಮಗೆ ಕೊಟ್ಟಿದ್ದ ಮಾತು ಗಂಟಲ ಮೇಲಿನ ಮಾತಲ್ಲದೆ ಹೃದಯದಿಂದ ಎದ್ದದಲ್ಲ ಎಂಬುದರ ಸಿದ್ಧಾಂತವಾಗಿ ಹೋಯಿತು. ಹೀಗೆ ನಮ್ಮನ್ನು ನಾವೇ ಅರಿಯದಿದ್ದ ಸ್ಥಿತಿಯಲ್ಲಿ ಈ ಎರಡು ಜೀವಗಳು ವಿವಾಹ ಬಂಧದಲ್ಲಿ ಸಿಲುಕಿದ್ದರೆ ಏನಾಗುತ್ತಿತ್ತು? ಊಹಿಸುವುದಾದರೂ ಸಾಧ್ಯವೆ? ನಿಮ್ಮದು ವಂಚನೆ ಎಂದು ಹೇಳುತ್ತೀರಿ........ ನನ್ನ ನಡತೆಯನ್ನು ಏನೆನ್ನುತ್ತೀರಿ? ಆತ–ನೀವು ಅಮೇರಿಕವನ್ನು ಬಿಟ್ಟ

ಬಳಿಕ ನಿಮ್ಮ ಸ್ಥಾನವನ್ನು ಆಕ್ರಮಿಸಿದಾತ—ನನ್ನ ಸಕಲ ಸಂಪತ್ತನ್ನೂ ಸುಲಿದು ನಿಷ್ಠುರ ಪ್ರಪಂಚದ ಮುಂದೆ ನನ್ನನ್ನು ಎಸೆದು ಎಲ್ಲಿಯೋ ಅಡಗಿದ........ಇದಕ್ಕೇನೆನ್ನುತ್ತೀರಿ?

ಪ್ರಭುಗಳು ದೊಡ್ಡ ನಿಟ್ಟುಸಿರು ಕರೆದರು. ತಮ್ಮ ನಡತೆ ಸರಿಯೆಂಬ ಕಾರಣದಿಂದಲ್ಲ; ಇಬ್ಬರೂ ಅಪರಾಧಿಗಳೆಂಬ ಅರಿವು ಮನಸ್ಸಿನ ವೇದನೆಯನ್ನಿಷ್ಟು ಕಡಿಮೆಮಾಡಿತಷ್ಟೆ....ಇದೂ ಒಂದು ಬಗೆಯ ಸಮಾಧಾನ........

ಹೀರೆ ಮುಂದುವರಿಸಿದಳು! "ಒಂದೆರಡು ವರ್ಷ ನರಕಯಾತನೆಯನ್ನನುಭವಿಸಿದೆ. ಈ ಮಧ್ಯೆ ನಿಮ್ಮ ನೆನಪು....ನಿಮಗೆ ಜನ್ಮಕೊಟ್ಟ ದೇಶದ ನೆನಪು....ಹಿಮಾಲಯದ ಸ್ಮರಣೆ........ಕಾಷಾಯ ವಸ್ತ್ರಧಾರಿಗಳಾಗಿ ಅಲೆದಾಡುವ ಸನ್ಯಾಸಿಗಳ ಕಲ್ಪನೆ.......ಯೋಗದ ಹುಚ್ಚು....... ಒಂದು ಬಾರಿಗೆ—ಕೊನೆಯ ಬಾರಿಗೆ....ಸಕಲ ಕಷ್ಟಗಳನ್ನೂ ಪರಿಹರಿಸುತ್ತೇನೆ ಎಂದು ನಿರ್ಧರಿಸಿ ಹಿಂದೂದೇಶಕ್ಕೆ ಬರಲೇಬೇಕೆಂದು ಯೋಚಿಸಿದೆ. ಒಂದು ವರ್ಷದ ಹಿಂದೆ ಪತ್ರ ಬರೆದಿದ್ದೆ...."

ಪತ್ರ ಬರೆದಿದ್ದಳು ಮಾತ್ರವಲ್ಲ; ಕೆಲವು ದಿನಗಳ ಹಿಂದೆಯೇ ನಮ್ಮೂರಿಗೂ ಬಂದು ವಿಚಾರಿಸುತ್ತಿದ್ದಳೆಂಬುದು ಪ್ರಭುಗಳಿಗೆ ತಿಳಿಯದಿರಲಿಲ್ಲ.

ಹೂಂ....ಎಂದಿಷ್ಟು ಅವರು ಉದ್ಗರಿಸಿದರು.

"ಸಂಕೋಚಪಡಬೇಡಿರಿ....ಬರೆದಿದ್ದೆ .... ನಿಮಗದು ಸಿಕ್ಕಿತ್ತು .... ನಿಮ್ಮ ಸ್ನೇಹಿತರೊಬ್ಬರಲ್ಲಿ ಈ ವಿಷಯ ಪ್ರಸ್ತಾವಿಸಿದ್ದಿರಿ...."

"ಹೌದು ಹೀರೆ....ಎಲ್ಲ ಸತ್ಯ...."

"ಹೌದು; ಅಲ್ಲವೆನ್ನಬೇಡಿ....ಇಲ್ಲಿಗೆ ಬಂದು ಉಳಿದ ಆಯುಷ್ಯವನ್ನು ಹಿಮಾಲಯದ ಪರ್ಣಕುಟೀರಗಳಲ್ಲಿ ಸವೆಯಬೇಕೆಂದು ಭಾವಿಸಿ ಹಾಗೆ ಬರೆದುದಾಗಿತ್ತು........ಉತ್ತರವನ್ನು ನಿರೀಕ್ಷಿಸುತ್ತಿದ್ದೆ........ಬರಲಿಲ್ಲ....ಈ ಮಧ್ಯೆ ನಿಮ್ಮ ಆಗುಹೋಗುಗಳನ್ನೂ ಅದೇ ಸ್ನೇಹಿತರು ನನಗೆ ಬರೆದು ತಿಳಿಸಿದರು...."

"ನನ್ನ ನಾಚಿಕೆಯ ಕತೆ ಸಮುದ್ರವನ್ನೂ ದಾಟಿತು....!"

"ಇಲ್ಲಿ ಅಂತಹ ವಿಷಯವೇನೂ ಇಲ್ಲ ಪ್ರಭುಗಳೆ....ಇಷ್ಟಾದ ಮೇಲೆ ನಿಮ್ಮ ಕಷ್ಟದಲ್ಲಿ ಒಂದಿಷ್ಟು ಸಹಾನುಭೂತಿ ತೋರಿಸಬೇಕೆಂದು ಅಂತರಂಗ ಪ್ರೇರಣೆಯಾಯಿತು....."

"ಸಹಾನುಭೂತಿಗೆ ಇದು ಪಾತ್ರವಲ್ಲ!"

"ಈ ವಿಶಾಲ ಪ್ರಪಂಚದಲ್ಲಿ ಎಷ್ಟು ಪಾಪಿಗಳಿಲ್ಲ? ಎಷ್ಟು ಪುಣ್ಯವಂತರಿಲ್ಲ? ಪ್ರಕೃತಿ ಎಲ್ಲರಲ್ಲಿಯೂ ಸಹಾನುಭೂತಿ ತೋರಿಸುವುದಲ್ಲವೆ? ಈತ ಪಾಪಿ ಎಂದು ಸೂರ್ಯನ ಪ್ರಕಾಶವು ಪಾಪಿಯನ್ನು ಅಂಧಕಾರಕ್ಕೆ ತಳ್ಳುವುದುಂಟೆ?"

ಪ್ರಭು ಮೌನಿಯಾಗಿದ್ದ. ಹೀರೆ ಮಾತಾಡುತ್ತಲೆ ಇದ್ದಳು.

"ಅಂದು, ಅಲ್ಲಿದ್ದಾಗ ನೀವು ಕೆಲವು ಅಮೂಲ್ಯ ವಸ್ತುಗಳನ್ನು ಕೊಟ್ಟಿದ್ದಿರಿ. ಎಂದು ನಾನು ನನ್ನ ವಾಗ್ದಾನವನ್ನು ಮುರಿದೆನೊ ಅಂದಿನಿಂದ ಅವು ಕದ್ದೊಡವೆಗಳಂತೆ ನನ್ನ ಪೆಟ್ಟಿಗೆಯೊಳಗೆ ಅಡಗಿದ್ದುವು........ ಇಂದು ಅವು ನಿಮ್ಮವೇ ಆಗಿವೆ....ನನ್ನ ಸಹಾನುಭೂತಿಯೂ ನಿಮ್ಮ ಕಡೆಗೆ!" ಎಂದು ತನ್ನ ಕೈಪೆಟ್ಟಿಗೆಯೊಳಗಿದ್ದ ಬೆಳ್ಳಿಯ ಕರಡಿಗೆಯೊಂದನ್ನು ಎತ್ತಿ ಹಿಡಿದಳು....

ಪ್ರಭುಗಳಿಗೆ ಏನು ತೋರಿತೊ ತಿಳಿಯದು. ಕೊಟ್ಟ ಕರಡಿಗೆಗೆ ಕೈನೀಡಲು ಧೈರ್ಯಬರಲಿಲ್ಲ.

"ತೆಗೆದುಕೊಳ್ಳಿ ಪ್ರಭುಗಳೆ! ತೆಗೆದುಕೊಳ್ಳಿ!! ಕೈಜೋಡಿಸಿ ಬೇಡುತ್ತೇನೆ!" ಎಂದು ಹೀರೆ ಅಂಗಲಾಚಿ ಬೇಡಿದಳು....

ಪ್ರಭುಗಳು ಸ್ವೀಕರಿಸಲೇ ಬೇಕಾಯಿತು. ಅನಂತರ ಹತ್ತು ನಿಮಿಷ ಆ ಬಿಳಿ ಹುಡುಗಿ ಪ್ರಭುಗಳ ಸಾಂಸಾರಿಕ ವಿಷಯಗಳನ್ನೆಲ್ಲ ಕೇಳಿ ಸಹಾನುಭೂತಿಯನ್ನು ಪ್ರಕಟಿಸಿ, ಉತ್ಸಾಹಕೊಟ್ಟು, ಧೈರ್ಯ ಹೇಳಿ, ಕೊನೆಗೆ ತನ್ನ ಕಣ್ಣನ್ನುಜ್ಜುತ್ತಾ ಬೀಳುಕೊಳ್ಳುವುದಕ್ಕೆ ಸಿದ್ಧಳಾದಳು.

"ಹೀರೆ! ನಾನೀಗ ತಾನೆ ಮತ್ತೊಮ್ಮೆ ಮನುಷ್ಯನಾದೆ!" ಎಂದು ಪ್ರಭು ಧೈರ್ಯದಿಂದ ಆಡಿದರು.

"ಪ್ರಪಂಚವನ್ನು ಇದಿರಿಸುವ ಬಗೆಯೆ ಅದು" ಎಂದು ಹೀರೆ ನಗುತ್ತಾ ಆಡಿದಳು.

"ಹೀರೆ....ನಿನ್ನ ದಿಕ್ಕು ಯಾವುದು?"

"ದಿಕ್ಕೆ? ನನಗೆ ಎಲ್ಲೆಲ್ಲಿಯೂ ಒಂದೇ ದಿಕ್ಕು."

"ಯಾವುದು....?"

"ಯಾವುದು ಇಡೀ ವಿಶ್ವವನ್ನು ಒಳಕೊಂಡಿರುವುದೋ ಅದು!"

ಅಷ್ಟರಲ್ಲಿ ಹೀರೆಯನ್ನು ಕೊಂಡೊಯ್ಯುವ ಗಾಡಿ ಬಂದು ರಸ್ತೆಯಲ್ಲಿ ನಿಂತಿತು. ''ಕಳುಹಿಸಿಕ್ಕೊಡಿ.......ಬರುತ್ತೇನೆ........'' ಎಂದು ಹೀರೆ ಬೇಡಿದಳು. ಅಲ್ಲದೆ ತಾನು ತಂದೊಪ್ಪಿಸಿದ ಅಲಂಕಾರ ಧರಿಸಿದ ಪತ್ನಿಯ ಮತ್ತು ಪ್ರಭುಗಳ, ಭಾವಚಿತ್ರವನ್ನು ಕಳುಹಿಸಿಕೊಡಬೇಕೆಂದು ಕೇಳಿದಳು. ''ಕೈಹಿಡಿದವಳೊಡನೆ ಸುಖವಾಗಿ ಬಾಳಿರಿ'' ಎಂಬುದು ಅವಳ ಕಡೆಯ ವಾಕ್ಯ.

ಸೂರ್ಯನು ಆಗ ತಾನೆ ಮುಳುಗುತ್ತಿದ್ದ. ಆತನ ಕಿರಣಗಳಿದಿರಲ್ಲಿ ಅವರಿಬ್ಬರ ರೆಪ್ಪೆಗೂ ಅಂಟಿಕೊಂಡಿದ್ದ ಕಣ್ಣೀರ ತುಂತುರುಗಳು ಬಗೆಬಗೆಯ ಬಣ್ಣಗಳಲ್ಲಿ ಮಿರುಗುತ್ತಿದ್ದುವು.

* * * *

ಬಂದಾಕೆ ರಸ್ತೆಗಿಳಿಯುವುದೂ ಗಂಗಮ್ಮ ಚಾವಡಿಗಿಳಿಯುವುದೂ. ಏಕಕಾಲದಲ್ಲಿ ಎಂಬಂತೆ ಆಗಿಹೋಯಿತು. ಇದೇನು ಎಂಬ ಪ್ರಶ್ನೆಯನ್ನು ಹೊಳೆಯಿಸುವ ದೃಷ್ಟಿಯಿಂದ ಗಂಗಮ್ಮ ಪ್ರಭುಗಳ ಮುಖವನ್ನೆ ನೋಡುತ್ತಿದ್ದಳು. ಪ್ರಭು ಏನೂ ಹೇಳಲಿಲ್ಲ. ತಲೆತಗ್ಗಿಸಿ ಮೌನವಾಗಿ ಕುಳಿತಿದ್ದ. ಗಂಗಮ್ಮ ಕೇಳದೆ ಬಿಡಲಿಲ್ಲ.

''ಇದೆಂತಹ ನಾಟಕ?'' ಎಂದು ಪ್ರಶ್ನಿಸಿದಳು ಗಂಗಮ್ಮ.

''ನಾಟಕದಲ್ಲಿ ಒಂದು ಚಿಕ್ಕ ದೃಶ್ಯ!" ಎಂದು ಉತ್ತರಕೊಟ್ಟ.

''ನೋಡು ಕಳೆದುಹೋದ ನಮ್ಮ ವಸ್ತು ಹಸ್ತಗತವಾಯಿತು" ಎಂದು ಗಂಗಮ್ಮನ ಕೈಯೊಳಗೆ ಕರಡಿಗೆಯನ್ನಿಟ್ಟ ಪ್ರಭು....ಗಂಗಮ್ಮ ಕುತೂಹಲದಿಂದ ತೆರೆದು ನೋಡಿದಳು....ಅದರೊಳಗೆ ಹತ್ತಿಪ್ಪತ್ತು ಸಾವಿರ ಬೆಲೆಯ ಒಡವೆಗಳಿದ್ದುವು. ಎಷ್ಟೊ ವರ್ಷದ ಹಿಂದಿನ ದಿನಗಳು ಒಂದರ ಹಿಂದೊಂದು ಎಂಬಂತೆ ಸ್ಮೃತಿಪಥದಲ್ಲಿ ಓಡುತ್ತಾ ಬಂದುವು.... ''ಇದು ನನ್ನಪ್ಪ ಕೊಟ್ಟ ವಜ್ರದ ಸರ!" ಎಂದು ಗಂಗಮ್ಮ ಆಶ್ಚರ್ಯ ಸಂತೋಷಗಳಿಂದ ಸೂರ್ಯನ ಬೆಳಕಿಗೆ ಹಿಡಿದು ಅದರ ಚಂದವನ್ನು ನೋಡುವುದರಲ್ಲಿ ಒಂದು ನಿಮಿಷ ಪ್ರಪಂಚವನ್ನು ಮರೆತಳು.

''ಇದು ಹೇಗೆ ಕೈಸೇರಿತು?"

''ಕೈಬಿಟ್ಟ ರೀತಿಯಲ್ಲಿಯೆ!"

''ಕಳೆದುಹೋಗಿತ್ತು ಎಂದಿರಲ್ಲವೇ?"

"ಹೌದು; ಕಳೆದುಹೋಗಿತ್ತು...."

"ಪುನಃ ಬಂತಲ್ಲವೆ?"

"ಯಾರಿಗಾಗಿ ಕಳೆದುಹೋಗಿತ್ತೊ ಅವಳ ಕೈಯಿಂದಲೆ ಬಂತು!"

ಈ ಮಾತನ್ನು ಕೇಳಿ ಗಂಗಮ್ಮ ಒಂದು ನಿಮಿಷ ಬೆರಗಾದಳು; ಬೆಚ್ಚಿಬಿದ್ದಳು. ಕೊನೆಗೆ—

"ಯಾರು ಈ ಹುಚ್ಚು ಹುಡುಗಿ?" ಎಂದು ಪ್ರಶ್ನಿಸಿದಳು.

"ಇರುವ ಪ್ರಪಂಚವನ್ನು ಇರುವಂತೆಯೆ ಇದಿರಿಸುವ ಯಾವಳೊ ಒಬ್ಬಳು!" ಎಂದು ಪ್ರಭುಗಳ ಉತ್ತರ ದೊರೆಯಿತು.

ಇವರಿಬ್ಬರು ಹಿಂದೆ ನಡೆಸುತ್ತಿದ್ದ ಸಂಭಾಷಣೆಯನ್ನು ಗಂಗಮ್ಮ ಕೇಳುತ್ತಿದ್ದಳೊ ಏನೊ.... ಅವಳು ಹೆಚ್ಚು ಪ್ರಶ್ನಿಸಲಿಲ್ಲ. ಆ ಹುಚ್ಚು ಹುಡುಗಿ ತನ್ನ ಕಣ್ಣಿನಲ್ಲಿ ನಿರರ್ಗಳ ಬಾಷ್ಪಧಾರೆಯನ್ನು ಸುರಿಸಿದಳೆಂಬುದೊಂದೆ ಗಂಗಮ್ಮನಿಗೆ ಖಂಡಿತವಾಗಿ ತಿಳಿದ ವಿಷಯ; ಅವಳೂ ಧಾರಾಳವಾಗಿ ಕಣ್ಣೀರು ಸುರಿಸಿದಳು. ಆ ಹುಚ್ಚು ಹುಡುಗಿಗೆ ತನ್ನ ಅಂತಃಕರಣದ ಕಾಣಿಕೆಗಳನ್ನು ಕೊಟ್ಟಳು!

---